# ವಿಮರ್ಶೆ

೨

ನಾಲ್ಕು ಲೇಖನಗಳು



ಮಾಸ್ತಿ ವೆಂಕಟೇಶ ಐಯಂಗಾರ್





# ವಿಮರ್ಶೆ

## ೨

ನಾಲ್ಕು ಲೇಖನಗಳು

ಮಾಸ್ತಿ ವೆಂಕಟೇಶ ಐಯಂಗಾರ್



ಬೆಂಗಳೂರು ಪ್ರೆಸ್ | ಮೈಸೂರು ರೋಡ್

೧೯೨೯

ಬೆಲೆ ೧೨ ಆಣೆ

# ಮುನ್ನುಡಿ

ನನ್ನಿಂದ ಆಗಾಗ ರಚಿತವಾದ ನಾಲ್ಕು ವಿಮರ್ಶನ ಲೇಖನಗಳನ್ನು ಒಟ್ಟುಗೂಡಿಸಿ ಈಗ ನಾಲ್ಕು ವರ್ಷಗಳ ಹಿಂದೆ ನಾನು ವಿಮರ್ಶೆ ಎಂಬ ಸಣ್ಣ ಪುಸ್ತಕವೊಂದನ್ನು ಅಚ್ಚುಹಾಕಿಸಿದೆನು. ಅದೇ ರೀತಿಯು ಇನ್ನು ನಾಲ್ಕು ಲೇಖನಗಳನ್ನು ಈಗ ಈ ಸಣ್ಣ ಪುಸ್ತಕದಲ್ಲಿ ಸೇರಿಸಿದೇನೆ. ಲೇಖನಗಳ ಆಶಯವೂ ಸ್ವಭಾವವೂ ಒಂದೇ ಆದದ್ದರಿಂದ ಈ ಲೇಖನ ಸಂಗ್ರಹಕ್ಕೂ ಅದೇ ಹೆಸರನ್ನು ಕೊಟ್ಟಿದೇನೆ.

ಹಿಂದೆ ಅಚ್ಚಾದ ಪುಸ್ತಕದ ಮೇಲೆ ವಿಮರ್ಶೆ ೧ ಎಂದು ಬರೆದಿದೆ. ನಮ್ಮ ಮಿತ್ರರೊಬ್ಬರು ಸೂಚಿಸಿದಂತೆ ಆ ಅಂಕವು ದೃಷ್ಟಿಯನ್ನು ಮುಂದಕ್ಕೆ ಚಾಚಿದ್ದು ನಿಜ. ಈ ಎರಡನೆಯ ಸಂಗ್ರಹವು ಅಚ್ಚಾದದ್ದರಿಂದ ಅದು ಸಾರ್ಥಕವಾಯಿತು. ಇಲ್ಲಿ ಹಾಕಿರುವ ಅಂಕಕ್ಕೆ ಸದ್ಯದಲ್ಲಿ ಮುಂದಣ ದೃಷ್ಟಿಯಿಲ್ಲ.

ಇಲ್ಲಿ ಸೇರಿರುವ ಲೇಖನಗಳಲ್ಲಿ ಗೀತಾಂಜಲಿಯನ್ನು ಕುರಿತ ಲೇಖನವು ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿಯೂ, ಹಾಫೀಸ್ ಕವಿಯನ್ನು ಕುರಿತದ್ದು ಕರ್ಣಾಟಕ ಸಹಕಾರಿ ಪತ್ರಿಕೆಯಲ್ಲಿಯೂ, ಶ್ರೀರಾಮಾಶ್ವಮೇಧವನ್ನು ಕುರಿತ ಲೇಖನವು ಪ್ರಬುದ್ಧ ಕರ್ಣಾಟಕದಲ್ಲಿಯೂ ಹಿಂದೆಯೇ ಪ್ರಕಟವಾದುವು. ಇವಕ್ಕೆ ತಮ್ಮ ಪತ್ರಿಕೆಗಳಲ್ಲಿ ಅವಕಾಶವನ್ನು ಕೊಟ್ಟುದಕ್ಕಾಗಿ ನಾನು ಆ ಪತ್ರಿಕೆಗಳ ಕರ್ತರಿಗೆ ವಂದನೆಗಳನ್ನು ಸೂಚಿಸುತ್ತೇನೆ. ಸಹಕಾರಿಯ ಆಗಣ ಸಂಪಾದಕರಾದ ರಾವ್ ಸಾಹೇಬ್ ಮಂಜೇಶ್ವರ ಅನಂತರಾಯರವರು ಮುಖತಃ ನನ್ನನ್ನು ಕಾಣದೇ ಇದ್ದರೂ ಬಹಳ ವರ್ಷಗಳಿಂದ ನನ್ನಲ್ಲಿ ಭ್ರಾತೃವಾತ್ಸಲ್ಯವನ್ನು ತೋರಿಸಿದ್ದಾರೆ. ಮುದ್ದಣನನ್ನು ಕುರಿತ ಲೇಖನವು ಕಾಗದದ ಮೇಲೆ ಬರಬೇಕಾದರೆ ನನ್ನ ಮಿತ್ರರಾದ ಶ್ರೀಮಾನ್ ತಲಕಿನ ವೆಂಕಣ್ಣಯ್ಯನವರು ವಹಿಸಿದ ಶ್ರಮವೆಂಥದೆಂದು ನಾನು ಹೇಳಲಾರೆ. ಮುಖ್ಯವಾಗಿ ಒಂದು

ಮಾತು. ಕನ್ನಡದ ಸಲುವಾಗಿ ನನಗೆ ದೊರೆತಿರುವ ಸ್ನೇಹಗಳು ನನಗೆ ಹೆಮ್ಮೆಯನ್ನುಂಟುಮಾಡುವಂಥವಾಗಿವೆ. ಈ ಸ್ನೇಹಗಳಿಗೆ ತಕ್ಕಂತೆ ನಡೆದುಕೊಳ್ಳುವುದು ಮಾತ್ರ ನನಗೆ ಜೀವನದಲ್ಲಿ ಸದಾ ಅನುಗ್ರಹವಾಗ ಬೇಕು.

ಗಯಟೆಯವರನ್ನು ಕುರಿತ ಲೇಖನವು ಅಚ್ಚಾಗುವುದು ಇದೇ ಮೊದಲು. ಇದರ ಕೆಲವು ಭಾಗವನ್ನು ಒಂದೆರಡು ತಿಂಗಳ ಹಿಂದೆ ಮೈಸೂರಿನಲ್ಲಿ ಮಹಾರಾಜರವರ ಕಾಲೇಜಿನ ಕರ್ಣಾಟಕ ಸಂಘದ ಮುಂದೆ ಓದಿ ಹೇಳಿದೆನು. ವಿಮರ್ಶೆಯ ಕಾರ್ಯದಲ್ಲಿ ಮನಸ್ಸು ಹೇಗೆ ಪ್ರವರ್ತಿಸಬೇಕೆಂಬುದನ್ನು ಗಯಟೆಯವರ ಮಾತುಗಳಿಂದ ನಮ್ಮ ಯುವಕರು ಗ್ರಹಿಸಬಹುದೆಂದು ನನ್ನ ಭಾವನೆ. ಇಂಗ್ಲೀಷಿನ ಪರಿಚಯ ವಿಲ್ಲದ ನಮ್ಮ ಹಿರಿಯರೂ ಕೂಡ ನಮ್ಮಂಥವರು ಪಾಶ್ಚಾತ್ಯ ಸಾಹಿತ್ಯ ದಲ್ಲಿಯೂ ಅದರ ಉನ್ನತವ್ಯಕ್ತಿಗಳಲ್ಲಿಯೂ ಯಾವುದನ್ನು ಕಂಡು ಬೆರಗಾಗಿದೇವೆಯೆಂಬುದನ್ನು ಇದರಿಂದ ಸ್ವಲ್ಪಮಟ್ಟಿಗೆ ತಿಳಿಯಬಹುದು. ನಮ್ಮ ಸಾಹಿತ್ಯವು ನಿಜವಾಗಿ ಬೆಳೆಯಬೇಕಾದರೆ ನಮ್ಮ ಜನರಿಗೆ ಗಯಟೆಯವರ ಮತ್ತು ಇತರ ಇಂಥ ಮಹನೀಯರ ಪರಿಚಯವು ವಿಶೇಷವಾಗಿ ಆಗಬೇಕು; ಇತರ ಸಾಹಿತ್ಯಗಳು ಉಳಿದದ್ದು ಹೇಗೆ ಬೆಳೆದದ್ದು ಹೇಗೆ ಎಂದು ನಮ್ಮ ಮನಸ್ಸಿಗೆ ಹಿಡಿಯಬೇಕು.

ಕವಿಯನ್ನು ಲೇಖನಗಳೆರಡರಲ್ಲಿ ಏಕವಚನದಲ್ಲಿಯೂ ಇನ್ನೆರಡರಲ್ಲಿ ಬಹುವಚನದಲ್ಲಿಯೂ ನಿರ್ದೇಶಿಸಿದೆ. ವಚನ ಭೇದವು ಗೌರವಬುದ್ಧಿ ಭೇದದಿಂದ ಬಂದದ್ದಲ್ಲವೆಂದು ಹೇಳಬೇಕಾದದ್ದಿಲ್ಲ. ಇಲ್ಲಿ ನಿರ್ದಿಷ್ಟರಾಗಿರುವ ನಾಲ್ವರೂ ಮಾನನೀಯರು, ಪೂಜ್ಯರು. ನಾಲ್ವರನ್ನೂ ನಾನು ಗೌರವ ಬುದ್ಧಿಯಿಂದಲೇ ಸಮಾಪಿಸಿದ್ದೇನೆ; ಇದು ಉಪನ್ಯಾಸಗಳಲ್ಲಿಯೂ ವ್ಯಕ್ತವಾಗಿದೆಯೆಂದು ನಂಬಿದೇನೆ.

**ಬೆಂಗಳೂರು ಶುಕ್ಲ ಸಂವತ್ಸರ**
**ಮಾರ್ಗಶಿರ ಶುದ್ಧ ದ್ವಿತೀಯೆ.**

ಮಾಸ್ತಿ ವೆಂಕಟೇಶ ಐಯಂಗಾರ್.

## ವಿಷಯಸೂಚಿಕೆ

---

## ಶ್ರೀನಿವಾಸ ರಚಿತ

---

ಕೆಲವು ಸಣ್ಣ ಕತೆಗಳು
ಬಿನ್ನಹ (ಗೀತೆಗಳು)
ಶಾಂತಾ (ಸಣ್ಣ ದೃಶ್ಯ)
ಸಾವಿತ್ರಿ ( ,, )
ಸಣ್ಣ ಕತೆಗಳು
ಸಾಹಿತ್ಯ (ಉಪನ್ಯಾಸ)
ಅರುಣ (ಪದ್ಯಗಳು)
ವಿಮರ್ಶೆ (ಲೇಖನಗಳು)
ಉಷಾ (ಸಣ್ಣ ದೃಶ್ಯ)
ಸುಬ್ಬಣ್ಣ (ಒಂದು ಕತೆ)
ತಾಳೀಕೋಟೆ (ಒಂದು ಪ್ರಕರಣ)

---

ಈ ಪುಸ್ತಕಗಳು ದೊರೆಯುವ ಸ್ಥಳಗಳು :—

ಎಂ. ಎಸ್. ರಾವ್ ಕಂಪೆನಿ, ದೊಡ್ಡಪೇಟೆ, ಬೆಂಗಳೂರು
ಕರ್ಣಾಟಕ ಸಂಘ, ಸೆಂಟ್ರಲ್ ಕಾಲೇಜು, ಬೆಂಗಳೂರು
ವಿಶ್ವಕರ್ಣಾಟಕ ಪುಸ್ತಕ ಪ್ರಕಟನಾಲಯ, ಬೆಂಗಳೂರು
ದಿ ಪ್ರೋಗ್ರೆಸ್ ಬುಕ್ ಸ್ಟಾಲ್, ಮೈಸೂರು
ಶ್ರೀ ಶಂಕರ ಕರ್ನಾಟಕ ಪುಸ್ತಕ ಭಾಂಡಾರ, ಧಾರವಾಡ

# ಗಯಟೆಯವರ ಮಾತಿನಲ್ಲಿಯ ಕಾವ್ಯಮೀಮಾಂಸೆ

೧

ಶಾಕುಂತಲ ನಾಟಕವನ್ನು ಬಾಯಿ ತುಂಬ ಹೊಗಳಿದ ಜರ್ಮನ್ ಕವಿ ಗಯಟೆಯವರ ಹೆಸರನ್ನು ಕೇಳದವರಾರು? ಇವರು ಪಾಶ್ಚಾತ್ಯ ಸಾಹಿತ್ಯಗಳ ಪ್ರಸಿದ್ಧ ಕವಿ ವರ್ಗದಲ್ಲಿ ಹಿರಿಯರಲ್ಲೊಬ್ಬರೆಂದು ಪರಿಗಣಿತ ರಾಗಿದಾರೆ. ಜರ್ಮನಿಗೂ ನಮಗೂ ವಿಶೇಷ ಸಂಬಂಧವಿಲ್ಲದ್ದರಿಂದ ಗಯಟೆಯವರ ಗ್ರಂಥಗಳು ನಮ್ಮಲ್ಲಿ ವಾಡಿಕೆಗೆ ಬಂದಿಲ್ಲ. ಆದ್ದರಿಂದ ಅವರ ಕವಿತೆ ಅಥವಾ ಇತರ ಕೃತಿಗಳು ಎಂಥವು ಎಂಬುದು ನಮ್ಮಲ್ಲಿ ಅನೇಕರಿಗೆ ತಿಳಿಯದು. 'ಗಯಟೆಯವರು ಸ್ವತಃ ಕವಿಗಳಾಗಿದ್ದರಲ್ಲದೆ ಕಾವ್ಯವಿಮರ್ಶೆಯಲ್ಲಿ ಬಹಳ ಕೆಲಸವನ್ನು ಮಾಡಿದರು. ಅವರು ಬರೆಯುವುದಕ್ಕೆ ಆರಂಭಮಾಡಿದ ಕಾಲವು ಪಾಶ್ಚಾತ್ಯ ಸಾಹಿತ್ಯಗಳ ನವಯುಗದ ಆರಂಭವೆನ್ನಬಹುದು. ಇಂಥ ಸಂದರ್ಭಗಳಲ್ಲಿ ಹಿಂದಣಿಂದ ಬಂದ ಸಂಪ್ರದಾಯಕ್ಕೆ ಅನುಸಾರವಾಗಿ ಗ್ರಂಥಗಳನ್ನು ರಚಿಸುವ ಮಾರ್ಗವೊಂದು, ಸಂಪ್ರದಾಯವನ್ನು ಬೆಳೆಯಿಸುತ್ತಾ ಸ್ವಲ್ಪ ಹೊಸ ದಾರಿಗಳಲ್ಲಿ ನಡೆಯುವುದಾದ ಮಾರ್ಗವೊಂದು—ಹೀಗೆ ಎರಡು ಮಾರ್ಗ ಗಳು ಸಾಹಿತ್ಯದಲ್ಲಿ ಕಾಣಬರುತ್ತವೆ. ಈ ಮಾರ್ಗಗಳನ್ನು ಸಿದ್ಧಾಂತ ಮಾರ್ಗ, ಸ್ವತಂತ್ರ ಮಾರ್ಗ ಎಂದು ನಾವು ಕರೆಯಬಹುದು. ಗಯಟೆ ಯವರ ಬಾಲ್ಯದಲ್ಲಿ ಪಾಶ್ಚಾತ್ಯ ಸಾಹಿತ್ಯಗಳಲ್ಲೆಲ್ಲಾ ಕವಿಗಳು ಹೊಸ ದಾರಿಗಳಲ್ಲಿ ನಡೆಯುವುದಕ್ಕೆ ಆರಂಭಿಸಿದರು. ಗಯಟೆಯವರು ಆ ಹೊಸ ದಾರಿಯಲ್ಲಿ ತಾವು ಅತಿಶಯವಾದ ಸಾಹಿತ್ಯ ಸೇವೆಯನ್ನು ಮಾಡಿದ್ದಲ್ಲದೆ ಇತರರಿಗೆ ಮೇಲ್ಪಂಕ್ತಿಯೂ ಆದರು. ಸಾಹಿತ್ಯದಲ್ಲಿ ಹೀಗೆ ಸ್ವತಂತ್ರಿಸಿ ಹೋಗುವುದರಲ್ಲಿ ಇವರು ತಮ್ಮ ಕಾರ್ಯದ ಸ್ವಭಾವವೆಂಥದೆಂದು ಪರಿಶೀಲಿಸುವುದೂ ಇತರರಿಗೆ ಹೇಳುವುದೂ ಆವಶ್ಯಕವಾಯಿತು. ಈ

ಕವಿಯು ಸ್ವಭಾವವಾಗಿಯೂ ವಿಶಾಲದೃಷ್ಟಿಯುಳ್ಳವರು; ಯೂರೋಪಾಖಂಡದ ಎಲ್ಲಾ ಸಾಹಿತ್ಯಗಳ ಪರಿಚಯವನ್ನೂ ಪಡೆದಿದ್ದರು; ಇತರರ ಗುಣಗಳನ್ನು ಸಂತೋಷದಿಂದ ಕೊಂಡಾಡುತ್ತಿದ್ದರು. ಇವರು ಭೌತಿಕಶಾಸ್ತ್ರಗಳಲ್ಲಿಯೂ ಪ್ರವೇಶಿಸಿ ಬಹಳ ವಿಧದ ಅನ್ವೇಷಣಗಳನ್ನು ನಡೆಯಿಸಿದರು. ಇದರಿಂದ ಇವರ ದೃಷ್ಟಿಯು ಕೇವಲ ಸಾಹಿತ್ಯದಷ್ಟು ಮಾತ್ರ ವ್ಯಾಪಿಸದೆ ಅವರ ಕಾಲದ ವ್ಯವಹಾರದಷ್ಟಕ್ಕೂ ಪ್ರಸರಿಸಿತ್ತು. ಅಲ್ಲದೆ ಇವರು ಚಿಕ್ಕಂದಿನಲ್ಲೇ ಜರ್ಮನಿಯಲ್ಲಿ ಒಂದು ಸಣ್ಣ ರಾಷ್ಟ್ರವಾದ ವೇಮರ್ ಎಂಬ ಸಾಮಂತ ರಾಜ್ಯದ ಮಂತ್ರಿಯ ಪದವಿಯನ್ನು ಪಡೆದರು. ಇದರಿಂದ ಇವರಿಗೆ ರಾಜ್ಯದ ಆಡಳಿತದ ವಿಚಾರಗಳೂ ಚೆನ್ನಾಗಿ ತಿಳಿದುವು. ಮಂತ್ರಿಯಾಗಿದ್ದಾಗ ಜನರ ವಿದ್ಯಾಭ್ಯಾಸ, ನಾಟಕರಂಗದ ಅಭಿವೃದ್ಧಿ, ದೇಶದ ಖನಿಜ ಸಂಪತ್ತಿನ ಅನ್ವೇಷಣ ಈ ಮೊದಲಾದ ಅನೇಕ ಕಾರ್ಯಗಳಲ್ಲಿ ಶ್ರದ್ಧೆಯಿಂದ ಕೆಲಸಮಾಡಿ ಇವರು ದೇಶದ ಸರ್ವತೋಮುಖವಾದ ಶ್ರೇಯಸ್ಸಿಗೆ ಕಾರಣರಾದರು. ವಿದ್ಯಾಶಾಲಿಗಳೂ ಪ್ರಬಲರೂ ಆದ ಇವರ ಆಶ್ರಯದಲ್ಲಿ ಹಲವು ಲೇಖಕರು ರಾಜನ ಅನುಗ್ರಹವನ್ನು ಪಡೆದು ಜರ್ಮನಿಯ ಸಾಹಿತ್ಯವೂ ಕುಶಲಕಲೆಯೂ ಮುಂದುವರಿಯುವಂತೆಯೂ ತಾವು ಹೆಸರನ್ನು ಸಂಪಾದಿಸುವಂತೆಯೂ ದುಡಿದರು. ಹೀಗೆ ಸ್ವತಃ ವಿದ್ವಾಂಸರಾಗಿ ವಿದ್ವಾಂಸರಿಗೆ ಆಶ್ರಯರಾಗಿ ವಿದ್ವಾಂಸರ ಸಹವಾಸದಲ್ಲಿ ಗಯಟೆಯವರು ಎಂಬತ್ತನಾಲ್ಕು ವಯಸ್ಸಿನವರೆಗೆ ದೃಢಕಾಯರಾಗಿ ಸುಖದಲ್ಲಿ ಜೀವಿಸಿದರು. ಇದರಿಂದೆಲ್ಲ ಇವರ ಪ್ರಪಂಚಜ್ಞಾನದಲ್ಲಿ ಒಂದು ರೀತಿಯ ಅಸಾಧಾರಣವಾದ ವೈಶಾಲ್ಯವೂ ಪ್ರಸಾದವೂ ತಲೆದೋರಿದುವು.

ಇಂಥ ಅತುಲವಾದ ಪ್ರಪಂಚಜ್ಞಾನವನ್ನು ಪಡೆದಿದ್ದ ಈ ಮಹಾಕವಿಯ ಬಳಿಗೆ ಅವರ ಎಪ್ಪತ್ತನಾಲ್ಕನೆಯ ವಯಸ್ಸಿನಲ್ಲಿ ಎಕರ್ಮನ್ ಎಂಬ ಒಬ್ಬ ತರುಣ ಕವಿಯು ತನ್ನ ಕೆಲಸದ ವಿಚಾರವಾಗಿ ಬುದ್ಧಿವಾದವನ್ನು ಪಡೆಯಬೇಕೆಂದು ಆಶಿಸಿ ಬಂದರು. ಇವರಿವರಿಗೆ ಮನಸ್ಸು ಹೊಂದಿ ಗಯಟೆಯವರು ಎಕರ್ಮನರನ್ನು ವೇಮರಿನಲ್ಲಿಯೇ ನಿಲ್ಲಿಸಿಕೊಂಡರು. ಎಕರ್ಮನ್ ಕವಿಯು ಗಯಟೆಯವರನ್ನು ತಮ್ಮ ಗುರು

ವೆಂದು ಸ್ವೀಕರಿಸಿ ಅವರ ಬಳಿ ಬರುತ್ತಾ ಹೋಗುತ್ತಾ ಅವರ ಕೆಲಸದಲ್ಲಿ ಸಹಾಯ ಮಾಡುತ್ತಾ ಅವರ ಮಾತುಗಳನ್ನು ಕೇಳಿ ಸಂತೋಷ ಪಡುತ್ತಾ ಇರುತ್ತಿದ್ದರು. ಹೀಗಿರುವಲ್ಲಿ ಅವರಿಗೆ ಒಂದು ಸಲ ಗಯಟೆಯವರ ಅಸಾಧಾರಣವೂ ಅಮೌಲ್ಯವೂ ಆದ ಜ್ಞಾನವನ್ನು ಪ್ರಕಟಿಸುವ ಈ ಮಾತುಗಳನ್ನು ಬರೆದಿಟ್ಟರೆ ಎಲ್ಲರಿಗೂ ಉಪಯೋಗವಾದೀತೆಂದು ತೋರಿ ಅವರು ಗಯಟೆಯವರು ಆಗಾಗ ಹೇಳಿದ ಮಾತುಗಳನ್ನು ಬರೆದು ಸೇರಿಸಿದರು. ಇವರು ಬರೆದ ಮಾತುಗಳ ಜತೆಗೆ ಸೋರೆಟ್ ಎಂಬ ಮತ್ತೊಬ್ಬ ವೇಮರ್ ಅಧಿಕಾರಿಯೂ ಗುರುತುಮಾಡಿಕೊಂಡಿದ್ದ ಕೆಲವು ಮಾತುಗಳನ್ನು ಸೇರಿಸಿ ಗಯಟೆಯವರು ತೀರಿಹೋದ ಮೂರು ನಾಲ್ಕು ವರ್ಷದ ಮೇಲೆ ಎಕರ್ಮನರು ಮೂರು ಪುಸ್ತಕಗಳನ್ನು ಅಚ್ಚು ಹಾಕಿಸಿದರು. ಇವು ಆಮೇಲೆ ಇಂಗ್ಲೀಷಿಗೆ ಭಾಷಾಂತರವಾದುವು. ಈ ಗ್ರಂಥಗಳಲ್ಲಿ ಗಯಟೆಯವರು ಆಗಾಗ ಹೇಳಿದ ಮಾತುಗಳು ಸಂಭಾಷಣೆಯಲ್ಲಿ ಹೇಗೋ ಹಾಗೆ ಸರಳವಾಗಿ ಸಹಜವಾಗಿ ನಮಗೆ ದೊರೆಯುತ್ತವೆ.

ಗಯಟೆಯವರ ಜೀವನ ಚರಿತ್ರೆಯನ್ನು ಓದಿದವರಿಗೆ ಅವರು ಎಷ್ಟು ಹಿರಿಯರು ಎಂದು ಆಶ್ಚರ್ಯವಾಗುತ್ತದೆ. ಆ ಚರಿತ್ರೆಯನ್ನು ಓದಿ ಎಕರ್ಮನರ ಈ ಪುಸ್ತಕಗಳನ್ನು ಓದಿದವರಿಗೆ ಆ ಹಿರಿದಾದ ಜೀವನವು ಈ ಮಾತುಗಳಲ್ಲಿ ಎಷ್ಟು ಚೆನ್ನಾಗಿ ವ್ಯಕ್ತವಾಗಿದೆ ಎನ್ನಿಸುತ್ತದೆ. ಗಯಟೆಯವರ ಮಾತು ಎಂಬ ಗ್ರಂಥವು ಇಂಗ್ಲೀಷ್ ಭಾಷಾಂತರದಲ್ಲಿ ಸುಮಾರು ಆರುನೂರು ಪುಟದಷ್ಟು ಆಗುತ್ತದೆ. ಭಾಷಾಂತರದಲ್ಲಿ ಕೂಡ ಓದುವುದಕ್ಕೆ ಬಹಳ ಹಿತವಾಗಿದೆ. ಈ ಮಾತುಗಳಲ್ಲಿ ಬಹಳ ನಮ್ಮವರಿಗೆ ತಿಳಿಯಬೇಕಾದುವೇ. ಆದರೆ ಅವನ್ನೆಲ್ಲ ಭಾಷಾಂತರ ಮಾಡುವುದೆಂದರೆ ಅದೇ ಒಂದು ಕೆಲಸವಾಗುತ್ತದೆ. ಇಲ್ಲಿ ಅಷ್ಟನ್ನು ಮಾಡುವುದಕ್ಕೆ ಯತ್ನಿಸದೆ ಗಯಟೆಯವರು ಆಗಾಗ ಕಾವ್ಯದ ಸ್ವರೂಪ, ಕರ್ತವ್ಯ ಮುಂತಾದ ವಿಷಯಗಳನ್ನು ಕುರಿತು ನುಡಿದ ಸೂಕ್ತಿಗಳಲ್ಲಿ ಹಲವನ್ನು ಆಯ್ದು ನಮ್ಮ ಜನರಿಗೆ ಪಾಶ್ಚಾತ್ಯ ಕವಿಗಳ ಕಾವ್ಯ ಮೀಮಾಂಸೆಯ ರೀತಿಯನ್ನು ತಿಳಿಸುವುದಕ್ಕೂ ಅದರ ಜತೆಯಲ್ಲಿ

ಈ ಪಾಶ್ಚಾತ್ಯ ಕವಿವರರ ಒಂದು ಚಿತ್ರವನ್ನು ತೋರಿಸುವುದಕ್ಕೂ ಪ್ರಯತ್ನವಾಡಿದೆ.

೨

ಗಯುಟೆಯುವರು ತರುಣ ಕವಿಗೆ—"ಸಣ್ಣ ಸಣ್ಣ ಕಾವ್ಯಗಳನ್ನು ಬರೆ. ಯಾವುದಾದರೊಂದು ಸಂದರ್ಭಕ್ಕೆ ಸಂಬಂಧಪಟ್ಟ ಕಾವ್ಯಗಳನ್ನು ಬರೆ. ದೊಡ್ಡ ಗ್ರಂಥಗಳನ್ನು ಆರಂಭಿಸಬೇಡ. ದೊಡ್ಡದಕ್ಕೆ ಕೈಹಾಕಿದರೆ ಸಣ್ಣದುದೆಲ್ಲವನ್ನೂ ಸಿಲ್ಲಿಸಬೇಕಾಗುತ್ತದೆ. ದೊಡ್ಡದು ಕೂಡ ಎಲ್ಲಾ ಭಾಗದಲ್ಲೂ ಚೆನ್ನಾಗಿ ಬರುವುದಿಲ್ಲ" ಎಂದು ಹೇಳುವರು. ಈ ಮಾತನ್ನು ಎಕರ್ಮನ್‌ಸರಿಗೆ ಹೇಳಿದಾಗ ಅವರು ನೀವು ಹೇಗನ್ ಕವಿಗೆ ಹಿಂದೆ ಇದನ್ನೇ ಹೇಳಿದ್ದೀರಲ್ಲವೆ ಎಂದು ಕೇಳಿದರು. ಅದಕ್ಕೆ ಗಯುಟಿಯುವರು ಹೀಗೆಂದರು:—"ಹೇಳಿದೆ. ನಿಜ. ಆದರೆ ನಾವು ಮುದುಕರಾದವರು ಹೇಳಿದ ಮಾತಿಗೆ ಜನರು ಕಿವಿಗೊಡುವರೇನು? ಒಬ್ಬೊಬ್ಬನೂ ತನ್ನ ಸಮಾಚಾರ ತನಗೇ ಚೆನ್ನಾಗಿ ತಿಳಿದಿದೆ ಎಂದುಕೊಂಡಿರುತ್ತಾನೆ. ಅನೇಕರು ಹೀಗೆ ತಮಗೆ ತೋರಿದ ದಾರಿಯಲ್ಲೇ ನಡೆದು ತೀರಾ ಕೆಡುತ್ತಾರೆ. ಇನ್ನು ಕೆಲವರು ದಾರಿ ತಪ್ಪಿ ಆಮೇಲೆ ಸರಿಯಾದ ದಾರಿಗೆ ಬರುತ್ತಾರೆ. ನಿಜವಾಗಿ ನೋಡಿದರೆ ತಪ್ಪು ದಾರಿಯಲ್ಲಿ ನಡೆಯುವ ದಿನ ಕಳೆದುಹೋಯಿತು. ಹಿಂದಣವರಾದ ನಮಗೆ ವಿಧಿಯಿರಲಿಲ್ಲ. ಈಗಣವರು ಹಾಗೆ ಮಾಡಬಾರದು. ನಾವು ದಾರಿತಪ್ಪಿ ತೊಳಲಿ ಸರಿಯಾದ ದಾರಿಯನ್ನು ಕಂಡುಹಿಡಿದು ಫಲವೇನು ಕಿರಿಯರು ಅದರಲ್ಲಿ ನಡೆಯದಿದ್ದರೆ? ಎಲ್ಲರೂ ತಪ್ಪುದಾರಿಯಲ್ಲಿ ನಡೆದು ಅದು ತಪ್ಪೆಂದು ತಿಳಿದುಕೊಂಡು ಆಮೇಲೆ ಸರಿಯಾದ ದಾರಿಗೆ ಬರುವುದಾದರೆ ಜನ ಮುಂದುವರಿಯುವ ಸಂಭವವೇ ಇಲ್ಲ."

ಕಾವ್ಯದ ವಸ್ತು ಎಂಥದಾಗಿರಬೇಕೆಂದು ಇವರು ಈ ಮಾತಿನಲ್ಲಿ ಹೇಳಿದ್ದಾರೆ. "ಪ್ರಪಂಚವೆಷ್ಟು ವಿಶಾಲವಾದದ್ದು. ಎಷ್ಟು ಪೂರ್ಣವಾದದ್ದು. ಜೀವನದಲ್ಲಿ ಎಷ್ಟು ವಿಧದ ವಿಷಯ. ಸಣ್ಣ ಸಣ್ಣ ವಿಷಯಗಳನ್ನು ಕುರಿತು ಕಾವ್ಯ ಬರೆಯುವವನಿಗೆ ವಸ್ತುವಿಲ್ಲದೆ ಎಂದಿಗೂ ಹೋಗುವುದಿಲ್ಲ. ಆದರೆ ವಿಷಯವು ಒಂದೊಂದು ಸಂದರ್ಭದಿಂದ

ಬೆಳೆದದ್ದಾಗಿರಬೇಕು. ಎಂದರೆ ಸತ್ಯವು ಕಾವ್ಯಕ್ಕೆ ವಸ್ತುವನ್ನು ಒದಗಿಸಬೇಕು; ಬರೆಯಬೇಕೆಂಬ ಪ್ರವೃತ್ತಿಯನ್ನು ಕೊಡಬೇಕು. ವಿಷಯ ಏಕದೇಶವಾದದ್ದಾದರೂ ಕವಿಯಾದವನು ಅದನ್ನು ಕುರಿತು ಬರೆಯುವುದರಿಂದ ಅದು ಕಾವ್ಯಾರ್ಹವೂ ಸರ್ವಸಂಬಂಧಿಯೂ ಆಗುತ್ತದೆ. ನನ್ನ ಕೃತಿಗಳೆಲ್ಲಾ ಏಕದೇಶವಾದ ವಿಷಯವನ್ನು ಕುರಿತವು; ಜೀವನದಿಂದ ಸೂಚಿತವಾದುವು; ಜೀವನದಲ್ಲಿ ದೃಢವಾದ ಬೇರುಳ್ಳವು. ಆಕಾಶದಿಂದ ಎಳೆದುತಂದ ಕೃತಿಗಳಿಗೆ ನಾನು ಗೌರವ ಕೊಡಲಾರೆನು.'' ನಿಜದಿಂದ ತೆಗೆದ ವಸ್ತುವೆಂದರೆ ಕಾವ್ಯರಸವಿಲ್ಲದೆ ಹೋಗಬಹುದು ಎಂದು ಶಂಕೆಯುಂಟಾಗಬಹುದು. ಅದಕ್ಕೆ ಅವರು "ನಿಜದಿಂದ ತೆಗೆದ ವಸ್ತುವಿನಲ್ಲಿ ಕಾವ್ಯರಸವಿಲ್ಲವೆಂದು ಹೇಳಬೇಡ. ಸಾಮಾನ್ಯವಾದ ವಿಷಯದೊಳಗಿಂದ ರಸಯುಕ್ತವಾದ ಭಾಗವನ್ನು ಗೆಲಿದು ತರುವುದರಲ್ಲಿಯೇ ಕವಿಯು ತನ್ನ ಕಾರ್ಯವನ್ನು ಸಾಧಿಸುತ್ತಾನೆ. ನಿಜವೇ ಕಾವ್ಯಕ್ಕೆ ಪ್ರೇರಕವಾಗಿರಬೇಕು. ಹೇಳಬೇಕಾದ ವಿಷಯವನ್ನೂ ನಿಜವೇ ಸೂಚಿಸಬೇಕು. ಎಂದರೆ ಅದು ಕಾವ್ಯದ ತಿರುಳನ್ನು ಒದಗಿಸಬೇಕು. ಆದರೆ ಇದೆಲ್ಲದರಿಂದ ಸುಂದರವಾದ ಸಜೀವವಾದ ಕೃತಿಯನ್ನು ರಚಿಸುವುದು ಕವಿಯನ್ನು ಸೇರಿದ ಕೆಲಸ.'' ಎನ್ನುವರು. (ಊಹೆಯಿಂದ ಏನನ್ನೋ ಬರೆಯುವ ಬದಲು ಒಂದು ವಿಷಯವನ್ನು ಕುರಿತು ಕಾವ್ಯವನ್ನು ಬರೆಯುವುದು ಒಳ್ಳೆಯದು ಎಂದು ಇವರ ಅಭಿಪ್ರಾಯ.) "ಇದು ಕಷ್ಟವೆಂದು ನಾನು ಬಲ್ಲೆ. ಆದರೆ ಯಾವುದಾದರೂ ಒಂದು ವಸ್ತುವನ್ನು ಅರಿಯುವುದು ವರ್ಣಿಸುವುದೇ ಕಾವ್ಯದ ಹೃದಯ. ಊಹೆಯಿಂದ ಸರ್ವರಿಗೂ ಸಾಧಾರಣವಾದ ಭಾವನೆಗಳನ್ನು ಹೇಳುವುದರಲ್ಲಿ ನೀನು ತೊಡಗಿರಲು ನೀನು ಮಾಡುವ ಕೆಲಸವನ್ನು ಇತರರೂ ಮಾಡಬಹುದು. ಯಾವುದೋ ಒಂದು ವಿಷಯವನ್ನು ಹಿಡಿದೆಯಾದರೆ ಇನ್ನು ಯಾರೂ ನೀನು ಹೇಳಿದ್ದನ್ನೇ ಹೇಳಲಾರರು. ಏಕೆ? ನೀನು ಯಾವ ಅನುಭವವನ್ನು ಪಡೆಯುವೆಯೋ ಅದೇ ಅನುಭವವನ್ನು ಇನ್ನು ಯಾರೂ ಪಡೆಯಲಾರರು....ಒಂದು ವಿಷಯವನ್ನು ಕುರಿತು ನೀನೊಬ್ಬನು ಧರಿಸಿದ ಭಾವನೆಯಿಂದ ಮಾತ್ರಕ್ಕೆ ಅದು ಜನರಿಗೆ

ಒಪ್ಪದೆಂದು ನೆನೆಯದಿರು. ಎಷ್ಟೇ ವಿಲಕ್ಷಣವಾದದ್ದಾದರೂ ಒಂದೊಂದು ವ್ಯಕ್ತಿಯೂ, ಕಲ್ಲಿನಿಂದ ಮನುಷ್ಯನವರೆಗೆ ಒಂದೊಂದು ವಸ್ತುವೂ, ಸಾಮಾನ್ಯ ಗುಣಗಳನ್ನು ಪಡೆದಿರುತ್ತದೆ. ಎಲ್ಲಾ ಕಡೆಯಲ್ಲಿಯೂ ಅದೇ ಗುಣಗಳು ಮರಳಿಮರಳಿ ಕಾಣುತ್ತವೆ; ಯಾವುದೂ ಎರಡು ಸಲ ಕಾಣದೆ ಒಂದೇ ಸಲ ಕಾಣತಕ್ಕದ್ದು ಇಲ್ಲ." ನಮ್ಮ ಸಾಹಿತ್ಯದಲ್ಲಿ ಪ್ರಸಿದ್ಧವಾದ ಕಾವ್ಯವಸ್ತುಗಳನ್ನೇ ತೆಗೆದುಕೊಳ್ಳುವ ವಾಡಿಕೆಯುಂಟಷ್ಟೆ. ಗಯಟೆಯವರು ಇದೇ ಅಭಿಪ್ರಾಯವುಳ್ಳವರಾಗಿದ್ದರು. "ಸ್ವತಂತ್ರವಾಗಿ ಏನನ್ನಾದರೂ ಸೃಷ್ಟಿಮಾಡಿ ಬರೆಯುವುದು ಮಾತ್ರ ಬೇಡ. ಕಥೆಯ ಕಲ್ಪನೆಯಲ್ಲಿ ಅದರ ಭಾಗಗಳನ್ನು ಜೋಡಿಸುವುದರಲ್ಲಿ ಎಷ್ಟು ಕಾಲ ಹೋಗುತ್ತದೆ. ಸಿದ್ಧವಾಗಿರುವ ವಿಷಯವನ್ನು ತೆಗೆದುಕೊಂಡು ಬರೆದೆಯಾದರೆ ಎಲ್ಲವೂ ಸುಲಭವಾಗುವುದು; ಚೆನ್ನಾಗುವುದು. ನಡೆದ ವಿಷಯವೂ ಅದರ ವ್ಯಕ್ತಿಗಳೂ ಸಿದ್ಧವಾಗಿರುವಲ್ಲಿ ಕವಿಯು ಅವಕ್ಕೆ ಜೀವಕಳೆಯನ್ನು ಮಾತ್ರ ಕೊಡಬೇಕಾಗುತ್ತದೆ. ಇದರಲ್ಲಿ ಅವನಿಗೆ ಆಯಾಸ ಕಡಿಮೆ. ಏಕೆಂದರೆ ಅವನು ಕೊಡುವುದು ತನ್ನ ಜೀವನದ ಭಾಗವನ್ನಲ್ಲ. ಆಯಾಸ ಕಡಿಮೆಯಲ್ಲದೆ ಕಾಲವೂ ಶಕ್ತಿಯೂ ಕಡಿಮೆಯಾಗಿ ವೆಚ್ಚವಾಗುತ್ತವೆ. ಕಾವ್ಯದ ರಚನೆಯಷ್ಟೇ ಅಷ್ಟೇ ಅವನ ಕೆಲಸ. ಯಾವಾಗಲೂ ಹಿಂದೆ ಉಪಯೋಗಿಸಲ್ಪಟ್ಟಿರುವ ವಿಷಯಗಳನ್ನೇ ತೆಗೆದುಕೊಳ್ಳಿ ಎಂದೇ ನಾನು ಹೇಳಿಯೇನು. ಇಫಿಜೇನಿಯಾ ಗ್ರಂಥಗಳು ಎಷ್ಟು ರಚಿತವಾಗಿವೆ. ಆದರೂ ಅವೆಲ್ಲ ಬೇರೆಬೇರೆಯೇ. ಒಬ್ಬೊಬ್ಬ ಕವಿಯೂ ಆ ಕಥೆಯನ್ನು ತನ್ನದಾದ ಒಂದು ಬೇರೆಯ ರೀತಿಯಲ್ಲಿ ಕಾಣುತ್ತಾನೆ ಜೋಡಿಸುತ್ತಾನೆ." ಫಣಿರಾಯನು ತಿಣುಕುವಷ್ಟು ರಾಮಾಯಣಗಳಾಗಿದ್ದರೂ ಮತ್ತೆ ರಾಮಾಯಣದ ಕತೆಯನ್ನು ಅಥವಾ ಅದರ ಭಾಗಗಳನ್ನು ಪ್ರತಿಪಾದಿಸುವ ಕಾವ್ಯಗಳನ್ನು ಬರೆಯುವುದಕ್ಕೆ ಅವಕಾಶವಿದೆಯೆಂದು ಇವರು ಹೇಳುತ್ತಿದ್ದರೆಂದು ಊಹಿಸಬಹುದಾಗಿದೆ.

ಕಾವ್ಯದಲ್ಲಿ ಮತವನ್ನು ವಿಷಯವಾಗಿ ತೆಗೆದುಕೊಂಡು ಬರೆಯುವುದನ್ನು ಕುರಿತು ಗಯಟೆಯವರು ಸ್ಪಷ್ಟವಾದ ಅಭಿಪ್ರಾಯವನ್ನು

ಸೂಚಿಸಿದಾರೆ. "ಜೀವನದ ಇತರ ಮುಖ್ಯ ವಿಚಾರಗಳಿಗೂ ಕುಶಲ ಕಲೆಗೂ ಇರುವ ಸಂಬಂಧವೇ ಮತಕ್ಕೂ ಕುಶಲ ಕಲೆಗೂ ಇದೆ. ಎಂದರೆ ಮತವಿಚಾರವು ಕಲೆಗೆ ಅರ್ಹವಾದ ವಸ್ತು; ಇತರ ವಸ್ತುವಿನಂತೆಯೇ ಇದನ್ನೂ ಕಾಣಬೇಕು. ಆದರೆ ಕಾವ್ಯವನ್ನು ಅನುಭವಿಸುವುದು ಆಸ್ತಿಕತೆ ನಾಸ್ತಿಕತೆಯ ದೃಷ್ಟಿಯಿಂದಲ್ಲ. ಅದರ ಯೋಗ್ಯತೆಯನ್ನು ತಿಳಿಯುವುದು ಬೇರೊಂದು ರೀತಿಯ ಕರಣಗಳ ಮೂಲಕ. ಕುಶಲ ಕಲೆಯು ತನ್ನನ್ನು ಅರಿಯುವ ಈ ಕರಣಗಳನ್ನು ಮುಟ್ಟುವುದಾಗಿರಬೇಕು. ಇಲ್ಲದಿದ್ದರೆ ಅದು ನಿಷ್ಫಲವಾಗುವುದು. ಮತ ಸಂಬಂಧವಾದ ವಿಷಯವು ಕುಶಲ ಕಲೆಗೆ ಯೋಗ್ಯವಾದ ವಸ್ತುವಾಗಬೇಕಾದರೆ ಅದರಲ್ಲಿ ಸರ್ವರನ್ನೂ ಆಕರ್ಷಿಸುವ ಸಾಮಾನ್ಯ ತತ್ತ್ವವಿರಬೇಕು." ಎಂದರೆ ತತ್ತ್ವ ಪ್ರತಿಪಾದನವು ಕಾವ್ಯದ ಕೆಲಸವಲ್ಲ. ಕಾವ್ಯವು ಮಾನವನ ರಸಜ್ಞಾನದ ನರಗಳನ್ನು ಮುಟ್ಟಬೇಕು. ಇದೇ ವಿಷಯ ಇವರು ಇನ್ನೊಂದು ಸಂದರ್ಭದಲ್ಲಿ ಹೇಳಿದ ಮಾತಿನಿಂದ ಹೊರಪಡುತ್ತದೆ. ಟೀಡ್ಜ್ ಎಂಬ ಕವಿಯು ಅಮರತೆಯನ್ನು ಕುರಿತ ಯೂರೇನಿಯಾ ಎಂಬ ಗ್ರಂಥವನ್ನು ಬರೆದಿದ್ದನು. ಅದನ್ನು ಕುರಿತು ಮಾತನಾಡುತ್ತಾ ಇವರು ಹೀಗೆಂದರು:—"ಒಂದು ಕಾಲದಲ್ಲಿ ಈ ಯೂರೇನಿಯಾ ಗ್ರಂಥ ಹೊರತು ಬೇರೆ ಮಾತೇ ಇಲ್ಲ. ಎಲ್ಲಿ ಹೋದರೂ ಯೂರೇನಿಯಾ. ಎಲ್ಲ ಮಾತಿನಲ್ಲಿಯೂ ಯೂರೇನಿಯಾ. ಮನುಷ್ಯನು ಸತ್ತೊಡನೆ ಅವನ ಪಾಡು ಮುಗಿಯಲಿ ಎಂದು ನನ್ನ ಅಭಿಪ್ರಾಯವಲ್ಲ. ಲೊರೆನ್‌ಜೊ ಮೆಡಿಚಿ ಹೇಳಿದಂತೆ ಮರಣಾನಂತರ ಜೀವನವಿಲ್ಲವೆನ್ನುವವರು ಈ ಜೀವನದಲ್ಲೇ ಮೃತರಾಗಿರುವರೆಂದು ನಾನು ಹೇಳಿಯೇನು. ಆದರೆ ಮರಣಾನಂತರ ಏನಾಗುವುದೆಂಬಂಥ ಗಹನವಾದ ವಿಷಯಗಳು ದಿನ ದಿನದ ವಿಚಾರಕ್ಕೂ ದಿನ ದಿನದ ಚಿಂತೆಗೂ ತಕ್ಕವಲ್ಲ. ತಾನು ಅಮರನೆಂದು ನಂಬುರುವವನು ಆ ನಂಬಿಕೆಯಿಂದ ಸಂತುಷ್ಟನಾಗಿ ಸುಮ್ಮನಿರಲಿ. ಹಾಗೆ ನಂಬಿದ್ದರಿಂದ ತಾನು ಬಹಳ ದೊಡ್ಡಮನುಷ್ಯನಾದೆನೆಂದು ವಿಜೃಂಭಿಸಲೇಕೆ? ಈ ವಿಚಾರ ಹಲವರು ನನ್ನೊಂದಿಗೆ ಮಾತನಾಡುವರು. ಆಗ ನಾನು ಅವರಿಗೆ 'ಮುಂದಕ್ಕೆ ಒಂದು ಬದುಕು ಇದೆಯೆಂದೇ ನನಗೆ ಪ್ರತ್ಯಾಶೆ

ಇದೆ, ಆದರೆ ಅದರಲ್ಲಿ ಇಲ್ಲಿಯ ನಿಮ್ಮಗಳನ್ನು ಕಾಣದೆ ಇರಬೇಕೆಂದು ಒಂದು ಹಾರೈಕೆ' ಎಂದು ಹೇಳಿದೆನು. ಅವರಿಗೆ ಕೋಪ ಬಂದಿತು. ಅಲ್ಲಿ ಇವರನ್ನು ಕಂಡೆನೆನ್ನು. ಅವರು ನನ್ನನ್ನು ಎಷ್ಟು ಹಿಂಸಿಸುವರು! ಈ ನಂಬಿಕೆವಂತರೆಲ್ಲ ನನ್ನ ಸುತ್ತ ಮುತ್ತಿಕೊಂಡು 'ನಾವು ಹೇಳಿದ್ದು ನಿಜವಾಯಿತು ನೋಡು. ನಾವು ಹೇಳಲಿಲ್ಲವೆ ಸತ್ತಮೇಲೆ ಜೀವನ ವಿದೆಯೆಂದು? ನಾವು ಹೇಳಿದಂತೆ ಆಗಿದೆಯಲ್ಲ?' ಎಂದು ಹೇಳುವರು. ಇಲ್ಲಿ ಮಾತ್ರವೇ ಅಲ್ಲ, ಅಲ್ಲಿ ಕೂಡ ನಮಗೆ ಬೇಸರಕ್ಕೆ ಕೊನೆಯಿಲ್ಲ ದಂತಾಗುವುದು."

೩

ಬೆಳೆದ ಸಾಹಿತ್ಯಗಳಲ್ಲಿ ಕಾವ್ಯದ ಸೃಷ್ಟಿಗೆ ಅನುಕೂಲ ಕಡಿಮೆ ಯೆಂದು ಗಯಟೆಯವರು ಒಂದು ಸಲ ಹೀಗೆ ಹೇಳಿದರು. "ಇಂಗ್ಲಿಷಿ ನವರಲ್ಲಿ ನಾಟಕ ರಚನೆಯ ಶಕ್ತಿಯುಳ್ಳವರಾರೇ ಆಗಲಿ ಷೇಕ್ಸ್ ಪಿಯರ ನಾಟಕಗಳನ್ನು ನೋಡದೆ ಇರಲಾಗುವುದಿಲ್ಲ. ಹಾಗೆ ನೋಡಿ ದ್ದಾದರೆ ಅವರಿಗೆ ಷೇಕ್ಸ್‌ಪಿಯರ್ ಕವಿಯು ಮಾನವ ಸ್ವಭಾವದ ಎಲ್ಲಾ ಪ್ರವೃತ್ತಿಗಳನ್ನೂ ಎಲ್ಲಾ ಉಬ್ಬು ಎಲ್ಲಾ ತಗ್ಗುಗಳನ್ನೂ ತನ್ನ ಕೃತಿಯಲ್ಲಿ ತಂದು ಮುಗಿಸಿದಾನೆಂದೂ ಷೇಕ್ಸ್‌ಪಿಯರ ತರುವಾಯ ಬಂದ ತನಗೆ ಇನ್ನು ಕೆಲಸವೇನೂ ಇಲ್ಲವೆಂದೂ ತೋರಬೇಕು. ಅನೂಹ್ಯ ವಾದ ದುಸ್ಸಾಧ್ಯವಾದ ಇಂಥ ಉತ್ತಮ ಗುಣಗಳು ಈಗಾಗಲೇ ಕಾವ್ಯ ದಲ್ಲಿ ಕಂಡಿವೆಯೆಂದಮೇಲೆ ಕಾಗದದಮೇಲೆ ಕಡ್ಡಿಯನ್ನಿರಿಸಲು ಅವನಿಗೆ ಧೈರ್ಯ ಹೇಗೆ ಬರಬೇಕು?

"ಐವತ್ತು ವರುಷದ ಹಿಂದೆ ನಮ್ಮ ಸೀಮೆಯಲ್ಲಿದ್ದ ಸ್ಥಿತಿಯಲ್ಲಿ ನನ್ನ ಅವಸ್ಥೆ ಹೀಗಾಗಲಿಲ್ಲ. ಆಗ ನಮ್ಮ ಸಾಹಿತ್ಯದಲ್ಲಿದ್ದದ್ದನ್ನೆಲ್ಲ ನಾನು ಜಾಗ್ರತೆಯಲ್ಲಿಯೇ ಮುಗಿಸಲು ಸಾಧ್ಯವಾಯಿತು. ಅದರಿಂದ ನನಗೆ ಅಧೈರ್ಯವುಂಟಾಗುವಂತಿರಲಿಲ್ಲ; ಅದನ್ನು ನಾನು ಅಷ್ಟು ಪರೀಕ್ಷಿಸಬೇಕಾಗಲಿಲ್ಲ. ನಾನು ಶೀಘ್ರದಲ್ಲಿಯೇ ಜರ್ಮನ್ ಸಾಹಿತ್ಯ ವನ್ನು ಹಿಂದೆ ಬಿಟ್ಟು ಜೀವನವನ್ನು ಅರಿಯುವುದಕ್ಕೂ ಗ್ರಂಥವನ್ನು ಬರೆಯುವುದಕ್ಕೂ ಮನಸ್ಸನ್ನು ಕೊಟ್ಟೆನು. ನಾನು ಇಂಗ್ಲಿಷರವ ನಾಗಿದ್ದಪಕ್ಷದಲ್ಲಿ ಆ ಭಾಷೆಯ ಅತ್ಯುತ್ತಮ ಕಾವ್ಯಗಳ ರಾಶಿಯನ್ನು

ನೋಡಿ ಭೀತನಾಗುತ್ತಿದ್ದೆನು, ಏನುಮಾಡುವುದೆಂದು ನನಗೆ ತೋಚದೆ ಹೋಗುತ್ತಿತ್ತು.''

ಹೀಗೆಂದ ಮಾತ್ರಕ್ಕೆ ಬೆಳೆದ ಸಾಹಿತ್ಯದಲ್ಲಿ ಬರೆವಣಿಗೆ ಇಲ್ಲದೆಯೇ ಹೋಗುವುದೆಂದು ಅಭಿಪ್ರಾಯವಲ್ಲ. ಆದರೆ ಹಾಗೆ ಬರೆಯುವವನು ಶಾಂತಿಯನ್ನು ಹುಡುಕಿ ಅದರಲ್ಲಿ ನಿಲ್ಲಬೇಕು. ''ಗಲಭೆಯಿಲ್ಲದ ಸಹಜವಾದ ನಿದ್ರೆಯೋಯೆಂಬಂತಿರುವ ಅವಸ್ಥೆಯಲ್ಲಿಯೇ ಘನವಾದ ಕಾವ್ಯ ಹುಟ್ಟಬೇಕಾದರೆ. ಆ ಅವಸ್ಥೆ ನಮಗೆ ಈಗ ಸಿಕ್ಕಲಾರದು. ಈಗ ನಮ್ಮವರ ಸರಕೆಲ್ಲ ಜನದ ಮುಂದೆ. ಐವತ್ತು ಕಡೆಯಿಂದ ಬರುವ ಈ ಕಾಲದ ದಿನ ದಿನದ ವಿಮರ್ಶೆಯೂ ಇದರಿಂದ ಜನರಲ್ಲಿ ಹುಟ್ಟುವ ಪೊಳ್ಳು ಮಾತೂ ಏನಾದರೊಂದು ಉತ್ತಮ ಗ್ರಂಥ ಬರದಂತೆ ಮಾಡಿವೆ. ಈ ಗಲಭೆಯಿಂದ ತಪ್ಪಿಸಿಕೊಂಡು ಒಂಟಿಯಾಗಿರಲಾರದವನು ಕೆಟ್ಟನು. ಪತ್ರಿಕೆಗಳು ರಸ ನಿರೂಪಣದ ಮತ್ತು ವಿಮರ್ಶೆಯ ವಿಷಯಗಳನ್ನು ಚರ್ಚೆಮಾಡಿ ಇದಲ್ಲ ಅದಲ್ಲವೆಂದು ಹೇಳುತ್ತಿರುವುದರಿಂದ ಜನರಿಗೆ ಒಂದು ರೀತಿಯ ಅರ್ಧ ಜ್ಞಾನದ ವಿಕಾಸವುಂಟಾಗಬಹುದು. ಆದರೆ ಬರೆಯುವವನಿಗೆ ಈ ರೀತಿಯ ವಿಮರ್ಶೆಯು ವಿಷಪ್ರಾಯವಾಗುತ್ತದೆ. ಇದರಿಂದ ಕಾವ್ಯರಚನೆಯ ಲತೆಯು ಸೊಗಸೆಂಬ ತಳಿರಿಂದ ಜೀವಾಳವೆಂಬ ತಿರುಳಿನವರೆಗೆ ತೀರ ಒಣಗಿಹೋಗುತ್ತದೆ.'' ಶಾಂತಿಯಿಲ್ಲದೆ ಕಾವ್ಯರಚನೆಯಿಲ್ಲ; ಅದಿಲ್ಲದೆ ಕವಿಗೆ ಸುಖವಿಲ್ಲ. ''ನಾನು ಬಹಳ ಅದೃಷ್ಟಶಾಲಿಯೆಂದು ಜನರ ಭಾವನೆ. ಇದು ನಿಜವೂ ಹೌದು. ನನ್ನ ಬದುಕು ನಡೆದ ರೀತಿಯನ್ನು ನೋಡಿ ಯಾವ ವಿಷಯದಲ್ಲಾಗಲಿ ಇದು ಕಡಿಮೆಯಾಯಿತೆಂದು ನಾನು ಹೇಳುವಂತಿಲ್ಲ. ಆದರೂ ಸತ್ಯವಾಗಿ ನೋಡಿದರೆ ದುಡಿಯುವುದು ಚಿಂತಿಸುವುದು ಹೊರತು ಸುಖವನ್ನು ನಾನರಿಯೆ. ಎಪ್ಪತ್ತೈದು ವರ್ಷ ಬದುಕಿದ್ದರಲ್ಲಿ ನಾನು ಒಂದು ತಿಂಗಳು ಕೂಡ ನಿಜವಾಗಿ ಸುಖಜೀವನವನ್ನು ಕಂಡವನಲ್ಲ. ದಿನಬೆಳಗಾದರೆ ಕಲ್ಲನ್ನು ಉರುಳಿಸುವಂತೆ ಬಾಳನ್ನು ಎತ್ತಿ ಎತ್ತಿ ಉರುಳಿಸುವ ಕೆಲಸವೇ ಆಗಿಹೋಯಿತು. ನನ್ನ ಜೀವನದ ಚರಿತ್ರೆಯನ್ನು ನೋಡಿದರೆ ಇದು ವ್ಯಕ್ತವಾಗುವುದು. ಒಳಗಿಂದಲೂ ಹೊರಗಿಂದಲೂ ನನ್ನನ್ನು ಕೆಲಸಕ್ಕೆ ಕರೆಯುವುದು ಅತಿಯಾಗಿಹೋಯಿತು.

"ನನಗೆ ನಿಜವಾಗಿ ಸುಖಕೊಡಬಲ್ಲದ್ದು ಕಾವ್ಯಚಿಂತನೆ, ಕಾವ್ಯ ರಚನೆ. ಆದರೆ ಇದಕ್ಕೆ ನನ್ನ ಪರಿಸ್ಥಿತಿಯಿಂದ ಬಂದ ಅಡ್ಡಿ ಎಷ್ಟು ಮೀರಿ ಎಷ್ಟು ಮಟ್ಟನೆಷ್ಟು. ಒಂಟಿಯಾಗಿರುತ್ತ ಪ್ರಪಂಚದ ಕೆಲಸದಿಂದ ಸುಮ್ಮನಿರುವುದು ನನಗೆ ಲಭಿಸಿದ್ದರೆ ನಾನು ಸುಖಿಯಾಗಿರುತ್ತಿದ್ದೆನು. ಹೆಚ್ಚಾಗಿ ಕವಿತಾಕಾರ್ಯವನ್ನು ಮಾಡುತ್ತಿದ್ದೆನು. ಗೋಟ್ಸೆ ಮತ್ತು ವರ್ದರ್ ಗ್ರಂಥಗಳನ್ನು ಬರೆದಮೇಲೆ ತತ್ತ್ವಜ್ಞನ ಈ ಮಾತು ನನ್ನ ಜೀವನದಲ್ಲಿ ನಿಜವಾಯಿತು. 'ಜನಕ್ಕಾಗಿ ನೀನು ಏನನ್ನಾದರೂ ಒಳ್ಳೆಯದನ್ನು ಮಾಡಿದರೆ ನೀನು ಇನ್ನೇನನ್ನೂ ಮಾಡದಂತೆ ಅದು ನೋಡಿಕೊಳ್ಳುತ್ತದೆ.'"

ಉತ್ತಮವಾದ ಬರೆವಣಿಗೆ ಸುತ್ತಣ ಪ್ರಪಂಚ ಸಂಸ್ಕೃತವಾಗಿದ್ದರೆ ಬರುವುದೇ ಹೊರತು ಇಲ್ಲದೆ ಇದ್ದರೆ ಬರುವುದಿಲ್ಲ. ಫ್ರಾನ್ಸಿನ ಗ್ಲೋಬ್ ಪತ್ರಿಕೆಯ ಲೇಖಕರು ಚಿಕ್ಕವಯಸ್ಸಿನಲ್ಲೇ ಉತ್ತಮ ರೀತಿಯ ಪ್ರಾಜ್ಞತೆಯನ್ನು ಪಡೆದಿರುವುದನ್ನು ಕುರಿತು ಒಂದು ಸಲ ಏಕರ್ಮನ್‌ರವರು ಆಶ್ಚರ್ಯವನ್ನು ಸೂಚಿಸಲು, ಗಯಟೆಯವರು ಹೀಗೆಂದರು :—

"ನಿನಗೆ ನಿಮ್ಮ ಕಾಡು ಸೀಮೆಯಲ್ಲಿ ಇದು ಕಷ್ಟ. ನಮ್ಮ ಸೀಮೆಯಲ್ಲೂ ನಾವು ತಿಳುವಳಿಕೆಯನ್ನು ಪಡೆಯಬೇಕಾದರೆ ಕಷ್ಟಪಟ್ಟಿದೇವೆ. ಅಲ್ಲದೆ ನಾವೆಲ್ಲ ಒಬ್ಬೊಬ್ಬರಿಗೆ ಸಂಬಂಧವಿಲ್ಲದ ಒಂದು ರೀತಿಯ ಕಷ್ಟ ಜೀವನವನ್ನು ನಡೆಯಿಸುತ್ತಿದೇವೆ. ನಮ್ಮ ಜನತೆಯಿಂದ ಸಂಸ್ಕಾರ ಪಡೆಯುವುದೆನ್ನುವುದು ನಮ್ಮ ಪಾಲಿಗೆ ಇಲ್ಲವೇ ಇಲ್ಲ. ನಮ್ಮಲ್ಲಿ ತಿಳಿವವರೆನ್ನುವವರು ಬುದ್ಧಿವಂತರಾದವರು ಜರ್ಮನಿಯಷ್ಟಗಲಕ್ಕೂ ಹರಡಿ ಹೋಗಿದಾರೆ. ಒಬ್ಬನು ವಿಯೆನ್ನಾದಲ್ಲಿ, ಒಬ್ಬನು ಬರ್ಲಿನ್ನಲ್ಲಿ, ಒಬ್ಬನು ಕೋನಿಗ್ಸ್‌ಬರ್ಗಿನಲ್ಲಿ, ಒಬ್ಬನು ಬೋನ್‌ನಲ್ಲಿ, ಡುಸ್ಸಲ್‌ಡಾರ್ಫ್‌ನಲ್ಲಿ. ಒಬ್ಬನಿರುವ ಕಡೆಯಿಂದ ಇನ್ನೊಬ್ಬನಿರುವ ಕಡೆಗೆ ನೂರು ಮೈಲಿ. ಇದರಿಂದ ಒಬ್ಬರನ್ನೊಬ್ಬರು ನೋಡುವುದು ಅಪೂರ್ವ. ಇದರಿಂದ ಎಷ್ಟು ನಷ್ಟವೆಂಬುದನ್ನು ನಾನು ಬಲ್ಲೆ. ಅಲೆಕ್ಸಾಂಡರ್ ಹಂಬೋಲ್ಟ್ ನನ್ನ ಬಳಿಗೆ ಬಂದಾಗ ಒಂದು ದಿವಸದಲ್ಲಿ ನಾನು ಹುಡುಕುತ್ತಿರುವ ನೂರು

ವಿಷಯವನ್ನು ನನಗೆ ಹೇಳುವನು. ಅವುಗಳನ್ನು ನಾನೇ ಕಂಡುಹಿಡಿಯ ಬೇಕಾದರೆ ವರ್ಷಾಂತರವಾಗಬಹುದು......

"....ಯಾವನೊಬ್ಬನಾಗಲಿ ಬುದ್ಧಿವಂತನಾಗಿ ಬೆಳೆಯಬೇಕಾದರೆ ಜನರಲ್ಲಿ ಬುದ್ಧಿಯೂ ತಿಳಿವಳಿಕೆಯೂ ಹರಡಿರುವುದು ಮುಖ್ಯ ಸಾಧನ.

"ಜರ್ಮನಿಯ ನಾವು ನೆನ್ನೆ ಮೊನ್ನೆಯವರು. ನಮ್ಮಲ್ಲಿ ಕಾವ್ಯದ ನಾಗರಿಕತೆಯು ನೂರು ವರ್ಷದಿಂದ ಇದೆ ಎನ್ನುವುದು ನಿಜ. ಆದರೆ ನಮ್ಮವರು ಸೌಂದರ್ಯವನ್ನು ಗ್ರೀಕ್ ಜನರು ಅರಿತ ರೀತಿಯಲ್ಲಿ ಅರಿಯುವು ದಕ್ಕೂ ಅವರಂತೆ ನಮ್ಮವರು ಒಳ್ಳೆಯ ಗೀತಕ್ಕೆ ಮನಸೋಲುವು ದಕ್ಕೂ ಇವರು ಒರಟಾಗಿದ್ದುದು ಬಹಳ ಹಿಂದೆ ಎನ್ನಿಸಿಕೊಳ್ಳುವು ದಕ್ಕೂ ಅವಶ್ಯಕವಾದ ತಿಳಿವು ನಮ್ಮಲ್ಲಿ ಹರಡಬೇಕಾದರೆ ಇನ್ನೂ ಕೆಲವು ಶತಮಾನಗಳು ಕಳೆಯಬೇಕು."

ಇದೇ ಅರ್ಥವನ್ನು ಇನ್ನೊಂದು ಸಂದರ್ಭದಲ್ಲಿ ಷೇಕ್ಸ್‌ಪಿಯರ್ ಕವಿಯ ಔನ್ನತ್ಯವನ್ನು ಕುರಿತು ಮಾತನಾಡುವಾಗ ಹೀಗೆ ವಿವರಿ ಸಿದರು: ಮೌಂಟ್ ಬ್ಲಾಂಕ್ ಎನ್ನುವುದು ಯುರೋಪಿನ ಪರ್ವತ ಶಿಖರಗಳಲೆಲ್ಲಾ ಎತ್ತರವಾದದ್ದು. "ಈ ವಿಚಾರದಲ್ಲಿ ಷೇಕ್ಸ್‌ಪಿಯರು ಸ್ವಿಟ್ಜರ್‌ಲೆಂಡಿನ ಪರ್ವತಗಳಂತೆ. ಮೌಂಟ್ ಬ್ಲಾಂಕನ್ನು ನಮ್ಮಸೀಮೆಯ ಮೈದಾನಕ್ಕೆ ತಂದರೆ ಅದರ ಎತ್ತರವನ್ನು ನೋಡಿ ನಾವು ಮಾತು ಮರೆಯುವೆವು. ಆದರೆ ಅದರ ಜನ್ಮಸ್ಥಳದಲ್ಲಿ ಅದನ್ನು ನೋಡು, ಅದರ ಜತೆಯ ಮಹಾಶಿಖರಗಳನ್ನೇರಿ ಅದನ್ನೇರು. ಆಗಲೂ ಅದು ಉನ್ನತ ಶಿಖರವೆಂದೇ ಕಾಣುವುದು. ಆದರೆ ಇಲ್ಲಿಯಹಾಗೆ ಮಾತು ಮರೆಯಿಸು ವುದಿಲ್ಲ."

೪

ಹಿಂದಣ ಹಿರಿಯ ಕಲೋಪಾಸಕರ ವಿಷಯದಲ್ಲಿ ಗಯಟೆಯವರಿಗೆ ಬಹಳ ಗೌರವಬುದ್ಧಿಯಿತ್ತು. ಒಂದು ಸಲ ಪೂರ್ವದ ಚಿತ್ರವೊಂದನ್ನು ನೋಡಿ ಸಂತೋಷಪಟ್ಟು ಇವರು:—"ಪೂರ್ವಿಕರು ಘನವಾದ ಭಾವನೆ ಗಳುಳ್ಳವರಾಗಿದ್ದರಲ್ಲದೆ ಅವುಗಳನ್ನು ಕಾರ್ಯದಲ್ಲಿ ತರುತ್ತಿದ್ದರು. ನಾವೋ ಘನವಾದ ಭಾವನೆಗಳನ್ನು ಪಡೆದಿದ್ದೇವೆ. ಆದರೆ ಮನಸ್ಸಿನಲ್ಲಿರುವಷ್ಟು

ಕಳೆಯಿಂದ ತೇಜಸ್ಸಿನಿಂದ ಅವನ್ನು ಹೊರಕ್ಕೆ ತರಲಾರೆವು" ಎಂದರು. ಫ್ರಾನ್ಸ್‌ದೇಶದ ನಾಟಕಕಾರರಲ್ಲಿ ಮಾಲಿಯೇರ್ ಪ್ರಸಿದ್ಧನು. ಈತನನ್ನೂ ಷೇಕ್ಸ್‌ಪಿಯರನ್ನೂ ಗಯಟೆಯವರು ಆಗಾಗ ಬಹಳವಾಗಿ ಪ್ರಶಂಸಿಸಿದಾರೆ. ಷೇಕ್ಸ್‌ಪಿಯರ್ ಕವಿಯ ನಾಟಕಗಳ ಸನ್ನಿವೇಶಗಳನ್ನು ಕುರಿತ ಕೆಲವು ಚಿತ್ರಗಳನ್ನು ನೋಡಿ ಸಂತೋಷವಾದ ಸಂದರ್ಭದಲ್ಲಿ ಒಂದುಸಲ ಹೀಗೆಂದರು:—"ಈ ಚಿತ್ರಗಳನ್ನು ನೋಡಿದರೆ ಭೀತಿಯಾಗುತ್ತದೆ. ಷೇಕ್ಸ್‌ಪಿಯರ್ ಕವಿಯ ನಿಸ್ಸೀಮವಾದ ಐಶ್ವರ್ಯವೂ ಔನ್ನತ್ಯವೂ ಇವುಗಳಿಂದ ಮನಸ್ಸಿಗೆ ತಟ್ಟುತ್ತದೆ. ಮಾನವ ಜೀವನದ ಯಾವ ಪ್ರವೃತ್ತಿಯನ್ನೂ ಇವನು ವಿವರಿಸದೆ ವರ್ಣಿಸದೆ ಬಿಡಲಿಲ್ಲ. ಆ ವಿವರಣೆ ವರ್ಣನೆಯಲ್ಲಿಯೂ ಎಷ್ಟು ಸರಳತೆ, ಎಷ್ಟು ಸ್ವಾತಂತ್ರ್ಯ......

"......ಈತನ ವಿಷಯ ಮಾತನಾಡುವುದು ದುಸ್ಸಾಧ್ಯ. ಎಷ್ಟು ಹೇಳಿದರೂ ಅದು ಸಾಲದು. ಇವನು ನಾಟಕ ಮಂದಿರದ ಕವಿಯಲ್ಲ. ರಂಗವನ್ನು ಕುರಿತು ಅವನು ಕೃತಿಗಳನ್ನು ಬರೆಯಲಿಲ್ಲ. ಅದು ಅವನ ಉದ್ದಾಮ ಬುದ್ಧಿಗೆ ಅತಿಸಣ್ಣದು. ಅದೇಕೆ ನಮ್ಮ ಕಣ್ಣಿಗೆ ಕಾಣುವ ಈ ಎಲ್ಲ ಪ್ರಪಂಚವೂ ಕೂಡ ಅವನ ಯೋಗ್ಯತೆಗೆ ಸಣ್ಣದೇ.

"......ಈ ಐಶ್ವರ್ಯವೂ ಈ ಶಕ್ತಿಯೂ ನಮ್ಮ ದೃಷ್ಟಿಯಿಂದ ಸ್ವಲ್ಪ ಮೇರೆ ಮೀರಿದೆಯೆಂದೂ ಹೇಳಬಹುದು. ಕಾವ್ಯಸೃಷ್ಟಿಯ ಪ್ರವೃತ್ತಿಯುಳ್ಳ ಮನುಷ್ಯನು ವರ್ಷ ಒಂದಕ್ಕೆ ಇವನ ನಾಟಕಗಳಲ್ಲಿ ಒಂದಕ್ಕಿಂತ ಹೆಚ್ಚಾಗಿ ಓದಬಾರದು. ಓದಿದರೆ ತನ್ನ ಕವಿತಾ ಶಕ್ತಿಯನ್ನು ಕಳೆದುಕೊಳ್ಳುವನು. ನಾನು ಎರಡು ನಾಟಕ ಬರೆದು ಇವನ ಸಹವಾಸಬಿಟ್ಟದ್ದು ಒಳ್ಳೆಯ ಕೆಲಸವಾಯಿತು. ಬೈರನ್ ಕವಿಯೂ ಷೇಕ್ಸ್‌ಪಿಯರ್ ಎಂದರೆ ಹೆಚ್ಚು ಗೌರವ ತೋರಿಸದೆ ತನ್ನ ದಾರಿ ತಾನು ಹಿಡಿದು ಬದುಕಿಕೊಂಡನು. ಷೇಕ್ಸ್‌ಪಿಯರನ್ನೂ ಕಾಲ್ಡರಾನ್ ಕವಿಯನ್ನೂ ಅನುಸರಿಸಿ ಎಷ್ಟು ಜನ ನಮ್ಮ ಕವಿಗಳು ಹಾಳಾದರು!

"........ಷೇಕ್ಸ್‌ಪಿಯರ್ ಕವಿಯು ಬೆಳ್ಳಿಯ ತಟ್ಟೆಗಳಲ್ಲಿ ಚಿನ್ನದ ಮಾವಿನಹಣ್ಣನ್ನು ಕೊಡುವನು. ನಾವು ಅವನ ಗ್ರಂಥಗಳನ್ನು ನೋಡಿ, ಅವನ ವಿಧಾನವನ್ನು ಕಲಿತು, ಅವನ ಆ ಬೆಳ್ಳಿಯ ತಟ್ಟೆಗಳನ್ನು

ಸಂಪಾದಿಸುವೆವು. ಆದರೆ ಆ ತಟ್ಟೆಗಳಲ್ಲಿ ಇಡುವುದಕ್ಕೆ ನಮ್ಮಲ್ಲಿರುವುದು ಬರಿಯ ಉರುಳುಗೆಡ್ಡೆ.''

ಒಂದುಸಲ ಮಾಲಿಯೇರ್ ಕವಿಯನ್ನು ಕುರಿತು ಹೀಗೆಂದರು :—

''ಮಾಲಿಯೇರ್ ಕವಿಯು ಬಹುದೊಡ್ಡವನು. ಅವನ ನಾಟಕವನ್ನು ಓದಿದ ಒಂದೊಂದು ಸಲವೂ ನನಗೆ ಆಶ್ಚರ್ಯವೇ ಉಂಟಾಗುತ್ತದೆ. ಅವನ ಜತೆಗೆ ಇನ್ನೊಬ್ಬರಿಲ್ಲ. ಅವನ ಹಾಸ್ಯವು ಶೋಕದ ಸೀಮೆಯಲ್ಲಿದೆ. ಅವನ ಕೃತಿಗಳು ದೂರವ್ಯಾಪಿಗಳು. ಅವುಗಳನ್ನು ಅನುಕರಿಸಿ ಬರೆಯಲು ಯಾರಿಗೂ ಧೈರ್ಯ ಸಾಲದು ........ ನಾನು ವರ್ಷ ವರ್ಷವೂ ಮಾಲಿಯೇರನ ಕೆಲವು ನಾಟಕಗಳನ್ನು ಓದುತ್ತೇನೆ. ಹೀಗಲ್ಲದೆ ಇಂಥ ಕೃತಿಗಳ ಮಹಿಮೆಯನ್ನು ನಮ್ಮಂತಹ ಸಣ್ಣವರು ಹೃದಯದಲ್ಲಿ ಸದಾ ಧರಿಸಲಾಗುವುದಿಲ್ಲ. ಆದಕಾರಣ ನಾವು ಆಗಾಗ ಈ ಕೃತಿಗಳನ್ನು ನೋಡಿ ನಮ್ಮ ಭಾವನೆಯನ್ನು ಹೊಸದಾಗಿ ಮಾಡಬೇಕು.''

ಸ್ಲೆಗಲ್ ವಿಮರ್ಶಕನು ತನ್ನ ಲೇಖನದಲ್ಲಿ ಗ್ರೀಕರಲ್ಲಿ ಪ್ರಸಿದ್ಧನಾದ ಯೂರಿಪಿಡೀಸ್ ಎಂಬ ಪ್ರಾಚೀನ ಕವಿಯನ್ನು ನಿರಾಕರಿಸಿ ಬರೆದದ್ದನ್ನು ಕುರಿತು ಇವರು ''ಯೂರಿಪಿಡೀಸ್ ಕವಿಯಲ್ಲಿ ದೋಷಗಳಿಲ್ಲವೆಂದು ನಾನು ಹೇಳುವುದಿಲ್ಲ. ಆದರೆ ಸಾಕ್ರಟೀಸನು ಅವನನ್ನು ತನ್ನ ಸ್ನೇಹಿತನೆಂದು ಕರೆದನು. ಅರಿಸ್ಟಾಟಲನು ಅವನನ್ನು ಸ್ತೋತ್ರಮಾಡಿದನು. ಮೆನಾಂಡರನು ಅವನಲ್ಲಿ ಗೌರವವನ್ನು ತೋರಿದನು. ಅವನು ತೀರಿಹೋದಾಗ ಏಥೆನ್ಸ್ ನಗರವೂ ಅವನ ಜತೆಯ ನಾಟಕಕಾರ ಸೋಫೋಕ್ಲೀಸನೂ ದುಃಖಸೂಚಕ ವಸ್ತ್ರವನ್ನು ಧರಿಸಿದರು. ಇಂತಹ ಕವಿಯಲ್ಲಿ ಏನೋ ಯೋಗ್ಯತೆಯಿದ್ದಿರಬೇಕು. ಇಷ್ಟು ಹಿರಿಯನಾದ ಪೂರ್ವಕವಿಯಲ್ಲಿ ಸ್ಲೆಗಲ್‌ನಂಥ ಆಧುನಿಕನು ದೋಷಗಳನ್ನು ಹುಡುಕಿ ಹೇಳುವುದಾದರೆ ಮೊಣಕಾಲೂರಿ ಗೌರವ ತೋರಿ ಹೇಳಬೇಕು.'' ಎಂದರು.

೫

ಕಲೆಯಲ್ಲಿ ಸ್ವಾತಂತ್ರ್ಯವೆಂಬ ಮಾತು ಇವರ ಮನಸ್ಸಿಗೆ ಒಪ್ಪುತ್ತಿರಲಿಲ್ಲ. ಲೋಕದಿಂದ ಕಲಿಯದೆ, ಜನರಿಂದ ಕಲಿಯದೆ, ಹಿರಿಯರಿಂದ ಕಲಿಯದೆ ಯಾರೂ ಏನನ್ನೂ ಮಾಡಲಾರರು ಎಂದು ಇವರ ಭಾವನೆ.

"ಯಾವಾಗ ನೋಡಿದರೂ ಜನರು ಸ್ವಾತಂತ್ರ್ಯವನ್ನು ಕುರಿತು ಮಾತನಾಡುತ್ತಾರೆ. ಅವರು ಹೇಳುವ ಮಾತೇನೆಂದು ನನಗೆ ತಿಳಿಯದೆ ಇದೆ. ನಾವು ಹುಟ್ಟಿದೊಡನೆ ಪ್ರಪಂಚವು ನಮ್ಮ ಮೇಲೆ ತನ್ನ ಪ್ರಭಾವವನ್ನು ಬೀರುತ್ತದೆ. ಇದು ಕೊನೆಯವರೆಗೂ ನಡೆಯುತ್ತಲೇ ಇರುತ್ತದೆ. ನಮ್ಮ ಶಕ್ತಿ ಉತ್ಸಾಹ ಬುದ್ಧಿ ಇವು ಹೊರತು ನಾವು ನಮ್ಮದೆಂದು ಕರೆಯಬಹುದಾದುದು ಏನಿದೆ? ಮಹಾನುಭಾವರಾದ ಪೂರ್ವಿಕರಿಂದಲೂ ಜತೆಯವರಿಂದಲೂ ನಾನು ಪಡೆದಿರುವುದನ್ನೆಲ್ಲ ನಾನು ಹೇಳಿದರೆ ನನ್ನದೆಂದು ಉಳಿಯಬಹುದಾದ್ದು ಅತ್ಯಲ್ಪ." ಕಾವ್ಯದಲ್ಲಿ ಪರಂಪರೆಯನ್ನು ಕುರಿತು ಇವರು ಒಂದುಸಲ ಹೀಗೆಂದರು:—"ಎಲ್ಲ ಕಲೆಯಲ್ಲಿಯೂ ಗುರು ಶಿಷ್ಯ ಪರಂಪರೆಯಿದ್ದೇ ಇರಬೇಕು. ಕಲೆಯಲ್ಲಿ ವಿಶಾರದನಾದ ಯಾವನನ್ನು ಕಂಡಾಗಲಾದರೂ ನೋಡು. ಅವನು ತನ್ನ ಪೂರ್ವಿಕರಿಂದ ಗುಣಗಳನ್ನು ಗ್ರಹಿಸಿರುವನೆಂಬುದು ಕಾಣುವುದು. ಅದರಿಂದಲೇ ಅವನು ಹಿರಿಯನಾಗಿರುವನು. ರ್‍ಯಾಫೇಲನಂತ ಚಿತ್ರಕಾರರು ಆಕಾಶದಿಂದ ಧುಮ್ಮಿಕ್ಕುವುದಿಲ್ಲ. ಪೂರ್ವದ ಕಲೆಯಲ್ಲಿ ಉತ್ತಮವಾದುದರಲ್ಲಿ ತಮ್ಮ ಬೇರನ್ನೂರಿರುವರು. ಅವರು ಹೀಗೆ ಮಾಡದೆಯಿದ್ದರೆ ಅವರ ವಿಷಯ ಮಾತನಾಡಬೇಕಾದ ಸಂದರ್ಭವೇ ಬರುತ್ತಿರಲಿಲ್ಲ."

ಇನ್ನೊಂದು ಸಂದರ್ಭದಲ್ಲಿ ಹೀಗೆಂದರು: "ನನಗೆ ಹಿಂದೆ ಬಾಳಿದವರಿಂದ ನಮ್ಮ ಜತೆಯಲ್ಲಿರುವವರಿಂದ ನಾವೆಲ್ಲ ವಿಷಯಗಳನ್ನು ಕಲಿಯಬೇಕು ತಿಳಿಯಬೇಕು. ಎಂಥ ಬುದ್ಧಿಯುಳ್ಳವನೇ ಆಗಲಿ ತನ್ನೊಳಗಣಿಂದಲೇ ಎಲ್ಲವನ್ನೂ ತರುವೆನೆಂದರೆ ಬಹಳ ಕೆಲಸಮಾಡಲಾರನು.... ನಾವು ಯಾವ ಗುರುವನ್ನೂ ನೋಡಿ ಕಲಿಯಲಿಲ್ಲ, ಸ್ವಬುದ್ಧಿಯಿಂದಲೇ ಎಲ್ಲವನ್ನೂ ಮಾಡಿದೆವು, ಎಂದು ಕೊಚ್ಚಿಕೊಳ್ಳುವ ಕಲೋಪಾಸಕರನ್ನು ನಾನು ನೋಡಿದೇನೆ. ಮೂರ್ಖರು! ಇವರು ಹೇಳುವುದು ಸಾಧ್ಯವಾದೀತೆ? ಹೆಜ್ಜೆಹೆಜ್ಜೆಗೂ ಪ್ರಪಂಚವು ಇವರಿಗೆ ಬುದ್ಧಿ ಕಲಿಸದೇ ಬಿಡುವುದೇ? ಇವರ ದಡ್ಡತನ ಎಷ್ಟೇ ಆದರೂ ಇವರಿಗೆ ಸ್ವಲ್ಪ ಒಳ್ಳೆಯದನ್ನು ಮಾಡದೆ ಇರುವುದೇ?......ಇತರರ ಮಾತು ಹಾಗಿರಲಿ. ನನ್ನ

ಮಾತನ್ನು ನಾನು ಹೇಳಬಹುದು. ನನಗೆ ತೋಚಿದ್ದನ್ನು ಹೇಳುತ್ತೇನೆ. ನನಗೆ ಜಂಭವಿಲ್ಲ. ಬಹಳ ವರ್ಷದ ನನ್ನ ಬಾಳಿನಲ್ಲಿ ಹೇಳಿಕೊಳ್ಳಬಹುದಾದ ಹಲವು ಕೆಲಸವನ್ನು ನಾನು ಮಾಡಿರುವುದು ನಿಜವಾದ ಮಾತು. ಆದರೆ ಸತ್ಯವಾಗಿ ನುಡಿಯುವುದಾದರೆ ಸುತ್ತಣ ಪ್ರಪಂಚದಲ್ಲಿರುವುದನ್ನು ಕಣ್ಣು ಕಿವಿ ಬಿಟ್ಟು ನೋಡುವುದರಲ್ಲಿ ಕೇಳುವುದರಲ್ಲಿ ಇಷ್ಟ; ವಿಚಾರಿಸಿ ತಿಳಿಯುವ, ಒಳ್ಳೆಯದು ಕೆಟ್ಟದೆನ್ನುವ, ನೋಡಿ ಕೇಳಿದ್ದನ್ನು ಸ್ವಲ್ಪ ಚೆನ್ನಾಗಿ ಹೇಳುವ, ಶಕ್ತಿ. ಇಷ್ಟು ಹೊರತು ನನ್ನದೆನ್ನುವುದು ಇವರಲ್ಲೇನಿತ್ತು. ನನ್ನ ಕೃತಿಗಳು ಕೇವಲ ನನ್ನೊಬ್ಬನ ಬುದ್ಧಿಯಿಂದ ಮಾತ್ರ ಆದುವೆನ್ನುವುದು ಶುದ್ಧ ತಪ್ಪು. ನನ್ನ ಸುತ್ತಣ ನೂರು ಜನ ನೂರು ಸನ್ನಿವೇಶಗಳಿಂದ ಆದುವು ಅವು.'' ಒಬ್ಬನಿಂದ ಒಬ್ಬನು ಕಲಿಯಬೇಕಾದರೆ ಸಹನೆಯಿರಬೇಕು. ''ಯಾವ ವಿಷಯದಲ್ಲೇ ಆಗಲಿ ನಮಗೆ ಯಾರಲ್ಲಿ ಪ್ರೀತಿಯಿದೆಯೋ ಅವರಿಂದ ಮಾತ್ರ ನಾವು ಏನನ್ನಾದರೂ ಕಲಿಯಬಹುದು. ಈಗ ಬೆಳೆಯುತ್ತಿರುವ ತರುಣ ಕವಿಗಳಲ್ಲಿ ನಾನೆಂದರೆ ವಿಶ್ವಾಸ ಕಾಣುತ್ತದೆ. ನನ್ನ ಜತೆಯವರಲ್ಲಿ ಇದು ಇತ್ತೆಂದು ಹೇಳಲಾರೆ. ಏಕೆ, ನನ್ನ ಕೆಲಸವನ್ನು ನಿಜವಾಗಿಯೂ ಮೆಚ್ಚಿದವನೆಂದು ನನ್ನ ಜತೆಯ ಪ್ರಮುಖ ಕವಿಗಳಲ್ಲಿ ಒಬ್ಬನ ಹೆಸರನ್ನೂ ನಾನು ಹೇಳಲಾರೆ. ಎಲ್ಲರೂ ಅತ್ಯುತ್ತಮವೆಂದು ಹೊಗಳಿದ ವರ್ದರ್ ಗ್ರಂಥದಲ್ಲಿ ಕೂಡ ಅವರು ದೋಷಗಳನ್ನು ಕಂಡರು. ಚೆನ್ನಾಗಿಲ್ಲವೆಂದು ಒಬ್ಬೊಬ್ಬನೂ ಹೇಳಿದ ಒಂದೊಂದು ಭಾಗವನ್ನೂ ನಾನು ಬಿಟ್ಟಿದ್ದರೆ ಆ ಪುಸ್ತಕದ ಒಂದು ಪಙ್ಕ್ತಿಯಾದರೂ ಉಳಿಯುತ್ತಿತ್ತೋ ಇಲ್ಲವೋ. ಈ ತಪ್ಪು ಹುಡುಕುವಿಕೆಯಿಂದ ನನಗೇನೋ ತೊಂದರೆಯಾಗಲಿಲ್ಲ ನಿಜ. ತಿಳಿದವರೆಂದ ಇಂಥ ಒಬ್ಬೊಬ್ಬರ ಅಭಿಪ್ರಾಯ ಎಂಥದಾದರೂ ಜನತೆಯು ಅದನ್ನು ಸರಿಪಡಿಸುತ್ತದೆ. ಲಕ್ಷ ಜನ ಓದುವರೆಂಬ ಧೈರ್ಯವಿಲ್ಲದವನು ಒಂದು ಪಙ್ಕ್ತಿಯನ್ನೂ ಬರೆಯಬಾರದು.''

೬

''ಇಪ್ಪತ್ತುವರುಷದ ದಿನ ನಮ್ಮ ಜನರು ನಾನು ದೊಡ್ಡ ಕವಿಯೆ, ಸ್ಕಿಲರ್ ದೊಡ್ಡ ಕವಿಯೆ ಎಂದು ಚರ್ಚೆಮಾಡಿದಾರೆ. ನ್ಯಾಯವಾಗಿ

ನೋಡಿದರೆ ಇಂಥ ಚರ್ಚೆಗೆ ಯೋಗ್ಯರಾದ ಇಬ್ಬರು ಕವಿಗಳು ಇದಾರಲ್ಲಾ ಎಂದು ಅವರು ಸಂತೋಷಪಡಬೇಕಾಗಿದೆ.'' ಒಂದು ಸಲ ಗಯಟೆಯವರು ಹೀಗೆಂದರು. ಈ ಮಾತಿನಲ್ಲಿ ಗಯಟೆಯವರು ತಮ್ಮ ಜನದ ವಿಷಯದಲ್ಲಿ ಅಸಮಾಧಾನಪಟ್ಟಿದ್ದರೆಂದು ಕಾಣುವುದು. ಸ್ಕಿಲರ್ ಕವಿಯೂ ಇವರೂ ಜತೆಯಾಗಿ ಕೆಲಸಮಾಡಿದವರು. ಗಯಟೆಯವರು ವಯಸ್ಸಿನಲ್ಲಿ ಹಿರಿಯರಾಗಿ ಉನ್ನತ ಸ್ಥಿತಿಯಲ್ಲಿದ್ದರೂ ಸ್ಕಿಲರನ್ನು ತಮ್ಮ ಸಹೋದರನಂತೆ ಕಾಣುತ್ತ ತಮ್ಮ ಕೆಲಸದಲ್ಲಿ ಆತನ ಸಲಹೆಗಳನ್ನು ಪರ್ಯಾಲೋಚಿಸುತ್ತ ಆತನ ಕೆಲಸದಲ್ಲಿ ತಮ್ಮ ಕೈಯಲ್ಲಾದ ಸಹಾಯ ಮಾಡುತ್ತ ಅವನೊಂದಿಗೆ ಏಕದೇಹ ನ್ಯಾಯದಿಂದ ಇದ್ದರು.[*] ಇವರಿಗೆ ಸ್ಕಿಲರ್ ಕವಿಯ ವಿಷಯದಲ್ಲಿ ಅಸೂಯೆ ಇರಲಿಲ್ಲ. ''ನಮ್ಮಂತಹ ಇಬ್ಬರು'' ಎಂದು ಹೇಳುವುದರಲ್ಲಿ ಇವರ ಆತ್ಮ ಪ್ರತ್ಯಯ ಒಂದೇ ಅಲ್ಲದೆ ಸ್ಕಿಲರ್ ಕವಿಯ ವಿಷಯದಲ್ಲಿ ಅವರಿಗೆ ಇದ್ದ ಗೌರವಬುದ್ಧಿಯೂ ವ್ಯಕ್ತವಾಗುತ್ತದೆ. ಇನ್ನೊಂದು ಸಂದರ್ಭದಲ್ಲಿ ಸ್ಕಿಲರ್ ಕವಿಯೂ ತಾವೂ ಸೇರಿ ರಚಿಸಿದ ಖಂಡನ ಸೂಕ್ತಿಮಾಲೆಯನ್ನು ಕುರಿತು ಮಾತನಾಡುವಾಗ ಗಯಟೆಯವರು ಸ್ಕಿಲರ್ ಬರೆದವು ತೀಕ್ಷ್ಣವಾಗಿ ಮೊನೆಯುಳ್ಳವಾಗಿದ್ದುವೆಂದೂ ತಾವು ಬರೆದುದೆಲ್ಲವೂ ಲಘುವಾದುವು ಸಾಮಾನ್ಯವಾದುವೆಂದೂ ಹೇಳಿದರಂತೆ. ಸ್ಕಿಲರ್ ಕವಿ ಮೊದಲೇ ತೀರಿಕೊಳ್ಳಲು ಆ ದುಃಖ ಶಮನವಾದಮೇಲೆ ಗಯಟೆಯವರು ಅವನನ್ನು ಕುರಿತು ಒಂದು ಚರಮ ಗೀತವನ್ನು ರಚಿಸಿದರು. ಇಷ್ಟು ವಿಶ್ವಾಸದಿಂದ ಬೆಳೆದ ತಮ್ಮ ಇಬ್ಬರಲ್ಲಿ ಜನರು ಭೇದವನ್ನು ಹುಡುಕುತ್ತ ಬಂದ ವಿಷಯದಲ್ಲಿ ಗಯಟೆಯವರಿಗೆ ಅಸಮಾಧಾನ. ಇದನ್ನು ಕುರಿತು ಇನ್ನೊಂದು ಸಲ ಅವರು ಹೀಗೆ ಹೇಳಿದರು: ''ನಮ್ಮ ಜನರ ಒರಟುತನಕ್ಕೆ ಕೊನೆಯಿಲ್ಲವೆಂದು ತೋರುತ್ತದೆ. ಸ್ಕಿಲರ್ ಕವಿಯ ಗ್ರಂಥ, ನನ್ನ ಗ್ರಂಥ ಎರಡರಲ್ಲಿಯೂ ಅಚ್ಚಾಗಿರುವ ಕೆಲವು ಪದ್ಯಗಳನ್ನು ನೋಡಿ ನಮ್ಮ ಜನರು ಈಗ ಇದು ಅವನದು, ಇದು ಇವನದು ಎಂದು ಕೂಗಾಡುತ್ತಿದ್ದಾರೆ. ಇದು ಯಾರದು ಎಂದು ನಿರ್ಧರಿಸುವುದು ಆವಶ್ಯಕವೆಂದು ಅವರ ಭ್ರಮೆ. ಈ ವಿಷಯವನ್ನು ನಿರ್ಧರಿಸಿ ಬರುವ ಪ್ರಯೋಜನ

ತಾನೇ ಏನು? ಇಬ್ಬರು ಕವಿಗಳು ಒಂದೇ ಪದ್ಯವನ್ನು ತಮ್ಮಿಬ್ಬರದೂ ಹೌದು ಎಂದದ್ದು ಇವರಿಗೆ ಸಾಲದೆ! ಸ್ಕಿಲರಿಗೂ ನನಗೂ ಇದ್ದ ಸ್ನೇಹದ ರೀತಿಯಲ್ಲಿ ಇಬ್ಬರು ವರ್ಷಾಂತರ ಜತೆಯಲ್ಲಿದ್ದು ಒಂದೇ ಓದು ಒಂದೇ ಬಳಕೆಯಲ್ಲಿದ್ದು ಒಬ್ಬರ ಕೆಲಸದಲ್ಲೊಬ್ಬರು ನೆರವಾಗಿದ್ದರೆ ಅಂಥ ಇಬ್ಬರ ಬದುಕೂ ಒಂದಾಗುತ್ತದೆ. ಯಾವುದಾದರೊಂದು ಭಾವನೆಯನ್ನು ನನ್ನದೇ ಅವನದೇ ಎಂದು ಹೇಳುವುದಕ್ಕಾಗುವುದಿಲ್ಲ. ನಮ್ಮಂತವರು ಇಷ್ಟು ಸ್ನೇಹದಿಂದಿರುವುದಕ್ಕೆ ಜನರು ಸಂತೋಷಪಡಬೇಕು.

"ಅನೇಕ ಪದ್ಯಗಳನ್ನು ನಾವಿಬ್ಬರೂ ಸೇರಿ ಮಾಡಿದೆವು. ಕೆಲವು ವೇಳೆ ನಾನು ಭಾವವನ್ನು ಕೊಟ್ಟೆನು. ಅವನು ಮಾತನ್ನು ಬರೆದನು. ಕೆಲವುದರಲ್ಲಿ ಭಾವ ಅವನದು ಮಾತು ನನ್ನದು. ಕೆಲವುವೇಳೆ ಒಂದು ಪಙ್ಕ್ತಿಯನ್ನು ಅವನೂ ಒಂದನ್ನು ನಾನೂ ರಚಿಸಿದೇವೆ. ನನ್ನದು ಅವನದು ಎಂದು ನಿರ್ಧರಿಸಿ ಆಗಬೇಕಾದದ್ದೇನು? ಇಂಥಾ ವಿಚಾರಕ್ಕೆ ಇಷ್ಟು ಗಮನ ಕೊಡಬೇಕಾದರೆ ಜನರು ಕಾಡುಮನುಷ್ಯರಾಗಿರ ಬೇಕು."

ಎಕರ್‌ಮನ್—"ಸಾಹಿತ್ಯದಲ್ಲಿ ಇಂಥ ಸಂದರ್ಭಗಳು ಆಗಾಗ ಒದಗುತ್ತವೆ. ಯಾವನಾದರೂ ದೊಡ್ಡ ಕವಿಯನ್ನು ಹಿಡಿದುಕೊಂಡು ಜನರು ಅವನು ಯಾವ ಯಾವ ಕಡೆಯಿಂದ ತಿಳಿವನ್ನು ಪಡೆದನೆಂದು ಹುಡುಕಲು ಮೊದಲುಮಾಡುವರು."

ಗಯುಟೆ—"ಇದೊಂದು ನಗೆಗೇಡು. ಬಲಶಾಲಿಯಾದ ಮನುಷ್ಯ ನೊಬ್ಬನನ್ನು ನೋಡಿ ಅವನು ಶಕ್ತಿಯನ್ನು ಪಡೆಯುವುದಕ್ಕೆ ಯಾವ ಕುರಿ ಕೋಳಿಗಳನ್ನು ತಿಂದನೆಂದು ವಿಚಾರಮಾಡಿದರೆ ಇಷ್ಟೇ ವಿವೇಕವೆನ್ನ ಬಹುದು."

ಒಬ್ಬರಿಂದೊಬ್ಬರು ವಿಷಯವನ್ನು ತೆಗೆದುಕೊಳ್ಳುವರೆನ್ನುವ ಮಾತಿಗೆ ಬೇರೆ ಬೇರೆಯ ಸೀಮೆಯ ಕಾವ್ಯಗಳಲ್ಲಿ ಒಂದೇ ತೆರದ ವಿಷಯ ಬರುವುದೆನ್ನುವ ಮಾತಿಗೆ ಇವರು ಇನ್ನೊಂದು ಸಲ—"ಪ್ರಪಂಚವು ಯಾವಾಗಲೂ ಒಂದೇ ರೀತಿಯಲ್ಲಿರುವುದು. ಸಂದರ್ಭಗಳು ಮರಳು ತ್ತವೆ. ಒಂದು ಜನಾಂಗವು ಇನ್ನೊಂದು ಜನಾಂಗದಂತೆ ಜೀವಿಸುತ್ತದೆ,

ಪ್ರೀತಿಸುತ್ತದೆ, ಅನುಭವಿಸುತ್ತದೆ. ಒಬ್ಬ ಕವಿ ಇನ್ನೊಬ್ಬ ಕವಿಯಂತೆ ಬರೆಯಬಾರದೇಕೆ? ಬಾಳಿನಲ್ಲಿ ಸಂದರ್ಭಗಳು ಇಲ್ಲಿಯಂತೆ ಅಲ್ಲಿ. ಕಾವ್ಯದಲ್ಲಿ ಏಕೆ ಅವು ಬೇರೆಯಾಗಬೇಕು'' ಎಂದರು.

೨

ಗಯಟೆಯವರು ತಮ್ಮ ಜನದ ವಿಷಯದಲ್ಲಿ ಅಸಮಾಧಾನಪಡುವುದಕ್ಕೆ ಹಲವು ಕಾರಣಗಳಿದ್ದುವು. ಒಂದನ್ನು ಮೇಲೆ ತಿಳಿಸಿದೆ. ತಾನು ಒಡಹುಟ್ಟಿದವನಂತೆ ಕಾಣುತ್ತಿದ್ದ ಸ್ಕಿಲರ್ ಕವಿಯನ್ನು ಬೇರೆಯಾಗಿ ಎಣಿಸುವುದಕ್ಕೆ ಜನರು ಯತ್ನಮಾಡಿದರು. ಇದರಂತೆ ಇನ್ನೂ ಇತರ ವಿಷಯದಲ್ಲಿ ಜನರು ಇವರಲ್ಲಿ ಅಸೂಯೆಯನ್ನು ತೋರಿದರು. ಈ ವಿಷಯವನ್ನು ಇವರು ಒಂದುಸಲ ಹೀಗೆ ವಿವರಿಸಿದರು:—''ಎಂದೂ ಜನರಿಗೆ ನನ್ನಲ್ಲಿ ಸಂಪೂರ್ಣವಾದ ತೃಪ್ತಿ ಇಲ್ಲವೇ ಇಲ್ಲ. ದೇವರು ನನ್ನನ್ನು ಮಾಡಿರುವ ರೀತಿಯಿಂದ ಬೇರೆ ರೀತಿಯಾಗಿದ್ದರೆ ಚೆನ್ನಾಗಿದ್ದಿತೆಂದು ಅವರ ಭಾವನೆ. ನನ್ನ ಬರವಣಿಗೆಯಿಂದ ಅವರಿಗೆ ಬರಿಯ ಸಂತೋಷವಾದದ್ದು ಬಹು ಅಪೂರ್ವ. ನನ್ನ ಶಕ್ತಿಯನ್ನೆಲ್ಲ ವೆಚ್ಚಮಾಡಿ ಬಹುಕಾಲ ಕೆಲಸದಿಂದ ನಾನು ಒಂದು ಗ್ರಂಥವನ್ನು ರಚಿಸಿ ಜನರಿಗೆ ಉಪಕಾರಮಾಡಿದಮೇಲೆ ಆ ಗ್ರಂಥವನ್ನು ತಕ್ಕಮಟ್ಟಿಗೆ ಇದೆಯೆಂದು ಅವರು ಹೇಳಿದ್ದಕ್ಕಾಗಿ ನಾನು ಅವರಿಗೆ ಕೃತಜ್ಞತೆಯನ್ನು ತೋರಬೇಕಾಗಿತ್ತಂತೆ. ಯಾರಾದರೂ ನನ್ನನ್ನು ಸ್ತೋತ್ರಮಾಡಿದಾಗ ನಾನು ಸಂತೋಷಪಟ್ಟು ನನ್ನ ಕಷ್ಟಕ್ಕೆ ಸ್ವಲ್ಪ ಪ್ರತಿಫಲ ದೊರೆಯಿತು ಎಂದು ಹೇಳಿಕೊಳ್ಳಕೂಡದು. ಅವರು ಸ್ತುತಿಸಲು ಪ್ರತಿಯಾಗಿ ನನ್ನ ಯೋಗ್ಯತೆ ಕಡಿಮೆ, ನನ್ನ ಕಾವ್ಯ ಚೆನ್ನಾಗಿಲ್ಲ ಎಂದು ವಿನಯದಿಂದ ನೈಚ್ಯಾನುಸಂಧಾನಮಾಡಬೇಕಾಗಿತ್ತಂತೆ. ಇದು ನನ್ನ ಸ್ವಭಾವಕ್ಕೆ ವಿರೋಧವಾದದ್ದು. ಆ ರೀತಿಯಲ್ಲಿ ಸುಳ್ಳು ವಿನಯವನ್ನು ತೋರಿಸಿದ್ದೆನಾದರೆ ನಾನು ತುಚ್ಛ ರೀತಿಯ ಆಷಾಢಭೂತಿಯಾಗುತ್ತಿದ್ದೆ. ನಾನು ಹೇಗೆ ಇದ್ದೆನೋ ಹಾಗೆ ನನ್ನ ಸ್ವಭಾವವನ್ನು ಜನರಿಗೆ ತೋರಿದ್ದರಿಂದ ನನ್ನನ್ನು ಇವರು ಅಹಂಕಾರಿ ಎಂದರು. ಈಗಲೂ ಹಾಗೆಯೇ ಎನ್ನುತ್ತಾರೆ. . . . . . . .''

ತಮ್ಮ ವಿರೋಧಿಗಳನ್ನು ಕುರಿತು ಇನ್ನೊಂದು ಸಂದರ್ಭದಲ್ಲಿ ಇವರು ಹೀಗೆಂದರು:—“ನನಗಾಗದ ಜನಕ್ಕೆ ಲೆಕ್ಕವೇ ಇಲ್ಲ. ಆದರೂ ಅವರನ್ನು ಕೆಲವು ಪಂಗಡಗಳಾಗಿ ವಿಂಗಡಿಸಬಹುದು. ನನ್ನ ಸಮಾಚಾರವನ್ನರಿಯದೆ ನನ್ನನ್ನು ವಿರೋಧಿಸುವವರು ಒಂದು ಪಂಗಡ. ಈ ಪಂಗಡದವರು ನನ್ನ ಸ್ವಭಾವವನ್ನು ತಿಳಿದುಕೊಳ್ಳಲಾರರು. ಆದರೂ ನನ್ನಲ್ಲಿ ತಪ್ಪನ್ನು ಹುಡುಕುವರು. ನನ್ನ ಬದುಕಿನಲ್ಲಿ ಈ ಪಂಗಡದವರು ನನಗೆ ಬಹಳ ಬೇಸರವನ್ನುಂಟುಮಾಡಿದಾರೆ. ಆದರೂ ಇವರ ತಪ್ಪಿಗೆ ನನ್ನ ಮನ್ನಣೆಯುಂಟು. ಏಕೆಂದರೆ, ಅವರು ಮಾಡು ತ್ತಿದ್ದುದೇನೆಂದು ಅವರಿಗೇ ತಿಳಿಯದು. ಎರಡನೆಯ ಪಂಗಡದವರು ನನ್ನ ವಿಷಯದಲ್ಲಿ ಈರ್ಷೆಯಿಂದ ಗ್ರಸ್ತರಾದವರು. ನನ್ನ ಶಕ್ತಿಯಿಂದ ನಾನು ಸಂಪಾದಿಸಿರುವ ಒಳ್ಳೆಯ ಸ್ಥಿತಿಯನ್ನೂ ಗೌರವ ಯುಕ್ತವಾದ ಸ್ಥಾನವನ್ನೂ ನೋಡಿ ಇವರು ಈ ಮನುಷ್ಯನಿಗೆ ಇವೆಲ್ಲ ಏಕೆ ಎನ್ನು ತ್ತಾರೆ. ಇವರು ನನ್ನ ಹೆಸರನ್ನು ಸಣ್ಣದುಮಾಡಿ ನನ್ನನ್ನು ನಾಶಪಡಿಸ ಬೇಕೆಂದು ಅಪೇಕ್ಷಿಸುವರು. ನನಗೆ ಬಡತನ ಬಂದು ಕಷ್ಟ ಅಡಸಿದರೆ ಇವರು ಆಮೇಲೆ ನನ್ನ ತಂಟೆಗೆ ಬರುವುದಿಲ್ಲ. ತಾವು ಯಶಸ್ವಿಗಳಾಗ ಲಿಲ್ಲವೆಂಬ ಕಾರಣದಿಂದ ನನ್ನಲ್ಲಿ ಮತ್ಸರ ತೋರುವ ಕೆಲವರು ಮೂರ ನೆಯ ಗುಂಪಿನವರು. ಈ ಗುಂಪಿನ ಹಲವರು ಬಹಳ ಒಳ್ಳೆಯ ಕವಿಗಳು. ಆದರೆ ನನ್ನಿಂದ ಇವರ ಹೆಸರು ಮುಂದೆ ಬರುವುದಕ್ಕೆ ಅಡ್ಡಿಯಾಯಿತೆಂಬ ಕ್ರೋಧವನ್ನು ಇವರು ಬಿಡಲಾರರು. ನಾಲ್ಕನೆಯ ಗುಂಪಿನವರೆಂದರೆ ಯಾವುದಾದರೊಂದು ವಿಶೇಷ ಕಾರಣದಿಂದ ನನ್ನ ಹಗೆಗಳಾಗಿರುವವರು. ನಾನು ಒಬ್ಬ ಮನುಷ್ಯನು ಮಾತ್ರ. ನನ್ನಲ್ಲಿ ಮಾನವ ವರ್ಗಕ್ಕೆ ಸಾಮಾನ್ಯವಾದ ದೋಷಗಳಿವೆ. ನನ್ನ ಬರಹಗಳಲ್ಲಿ ಇವು ಕಾಣದೆ ಇರ ಲಾರವು. ಇವುಗಳನ್ನು ತಪ್ಪಿಸಿಕೊಳ್ಳುತ ನಾನು ಬೆಳೆಯುತ್ತಿರಲಾಗಿ ಈ ಪಂಗಡದ ಜನರು ನನ್ನ ಗ್ರಂಥಗಳನ್ನು ನೋಡಿ ನಾನು ಎಂದೋ ಇದ್ದ ಸ್ಥಿತಿಯನ್ನು ಊಹಿಸಿ ನನ್ನನ್ನು ದೂಷಿಸುವರು........ನನ್ನ ಅಭಿಪ್ರಾಯಗಳು ನನ್ನ ಭಾವದ ರೀತಿಗಳು ತಮಗೆ ಸಮ್ಮತವಾಗದ ಕಾರಣ ನನ್ನ ಹಗೆಗಳಾದವರು ಹಲವರು....” ತಮ್ಮ ಜನರು ಕಷ್ಟ

ಪಡುವುದಿಲ್ಲವೆಂದೂ ಜಂಭ ಮಾಡುತ್ತಿದ್ದರೆಂದೂ ಗಯಟೆಯವರ ಭಾವನೆ. ಇವರ ಫೌಸ್ಟ್ ಎಂಬ ನಾಟಕವು ಜಗತ್ಪ್ರಸಿದ್ಧವಾದದ್ದು. ಇದರ ಮೊದಲ ಭಾಗವನ್ನು ಯುವಕರಾಗಿದ್ದಾಗ ಬರೆದು ಎರಡನೆಯ ಭಾಗವನ್ನು ಆರಂಭಮಾಡಿ ಸಾಯುವುದಕ್ಕೆ ಕೊಂಚ ಮುಂಚೆ ಮುಗಿಸಿದರು. ಇವರು ಎರಡನೆಯ ಭಾಗವನ್ನು ಬರೆಯುವ ಕೆಲಸದಲ್ಲಿಯೇ ಇದ್ದಾಗ ಜರ್ಮನ್ ತರುಣನೊಬ್ಬನು ಆ ಗ್ರಂಥದ ಎರಡನೆಯ ಭಾಗವನ್ನು ಹೇಗೆ ನಡೆಯಿಸಬೇಕೆಂಬ ವಿಷಯದಲ್ಲಿ ಅವರ ಉದ್ದೇಶವನ್ನು ತಿಳಿಸಿದರೆ ತಾನು ಅದನ್ನು ಮುಗಿಸುವೆನೆಂದು ಹೇಳಿ ಇವರಿಗೆ ಪತ್ರ ಬರೆದನು. ಈ ಮಾತು ಬಂದಾಗ ಕಾವ್ಯ ಪ್ರಪಂಚದ ಪರಿಸ್ಥಿತಿಯನ್ನು ಕುರಿತು ಗಯಟೆಯವರು ಹೀಗೆಂದರು :—"ರಾಜ್ಯದಲ್ಲಿ ದೌರ್ಭಾಗ್ಯವೆನ್ನುವುದು ಯಾರೂ ಶಾಂತರಾಗಿ ಬಾಳದೆ ಎಲ್ಲರೂ ಆಳಬೇಕೆನ್ನುವುದು. ಕಲೆಯಲ್ಲಿ ದೌರ್ಭಾಗ್ಯವೆನ್ನುವುದು ಸೃಷ್ಟವಾಗಿರುವ ಕಾವ್ಯವನ್ನು ಯಾರೂ ಓದದೆ ಎಲ್ಲರೂ ತಮ್ಮದೊಂದು ಕಾವ್ಯವನ್ನು ಸೃಷ್ಟಿಸಬೇಕೆನ್ನುವುದು. ಯಾವನೂ ಒಂದು ಕೃತಿಯನ್ನು ನೋಡಿ ತನ್ನ ಕೆಲಸದಲ್ಲಿ ಮುಂದಕ್ಕೆ ನಡೆಯಲು ಯತ್ನ ಮಾಡುವುದಿಲ್ಲ. ಮಾಡಿ ಆಗಿರುವುದನ್ನೇ ಮರಳಿ ಎಲ್ಲರೂ ಮಾಡುವರು. ಅಲ್ಲದೆ ವಿಶ್ವವನ್ನು ಸಮೀಪಿಸುವ ಶ್ರದ್ಧೆ, ವಿಶ್ವಕ್ಕಾಗಿ ದುಡಿಯುವ ಅಭಿಲಾಷೆ ಎಲ್ಲಿಯೂ ತೋರುವುದಿಲ್ಲ. ಒಬ್ಬೊಬ್ಬನೂ ತನ್ನ ವ್ಯಕ್ತಿಯನ್ನು ಪ್ರಕಟಿಸಿಕೊಳ್ಳಲು ನೋಡುವನು. ಈ ದುಷ್ಪ್ರವೃತ್ತಿಯು ಎಲ್ಲಿ ಕಡೆಯೂ ಕಾಣುತ್ತದೆ. ನಮ್ಮ ಆಧುನಿಕ ಸಂಗೀತಗಾರರಂತೆ ನಮ್ಮ ಗ್ರಂಥಕರ್ತರೂ ಕೂಡ, ಜನಕ್ಕೆ ಯಾವುದರಿಂದ ಹೆಚ್ಚು ಸುಖವೆನ್ನುವುದನ್ನು ಯೋಚಿಸಿ ಅದನ್ನು ಮಾಡುವುದನ್ನು ಬಿಟ್ಟು, ತಮ್ಮ ಕೌಶಲವನ್ನು ಪ್ರದರ್ಶಿಸಿ ಪ್ರಶಸ್ತಿಯನ್ನು ಪಡೆಯುವ ಕೆಲಸಗಳನ್ನೇ ಮಾಡುತ್ತಾರೆ. ಎಲ್ಲ ಕಡೆಯೂ ತಾನು ದೊಡ್ಡವನೆಂದು ತೋರಿಸಿಕೊಳ್ಳುವ ವ್ಯಷ್ಟಿ ಭಾವವು ಕಾಣುತ್ತದೆ. ಸಮಷ್ಟಿಗೆ ಅಧೀನವಾಗಿ ಸಾರ್ಥಕವಾಗಲು ಯಥಾರ್ಥವಾದ ಯತ್ನವು ಎಲ್ಲಿಯೂ ಕಾಣುತ್ತಿಲ್ಲ.

"ಇದರಿಂದಲೇ ಜನರು ಅರ್ಧಂಬರ್ಧವಾಗಿ ಕೆಲಸಮಾಡುವ ವಾಡಿಕೆಗೆ ಬರುವುದು. ಬಾಲಕರು ಪ್ರಾಸಗಳನ್ನು ಪೋಣಿಸಿ ಬರೆದು

ತರುಣರಾಗುವ ವೇಳೆಗೆ ತಾವೂ ಕವಿತೆ ಬರೆಯಬಲ್ಲೆವೆಂದು ನಂಬುತ್ತಾರೆ. ಕೊನೆಗೆ ಅವರಿಗೆ ಈಗಾಗಲೇ ಎಷ್ಟು ಒಳ್ಳೆಯ ಕೆಲಸ ನಡೆದಿದೆಯೆಂದು ತಿಳಿದು ಆವರು ಅದುವರಿಗೆ ಕಾಲ ವ್ಯರ್ಥವಾಯಿತಲ್ಲಾ ಎಂಬ ವ್ಯಥೆಪಡು ತ್ತಾರೆ. ಅನೇಕರಿಗೆ ಕಾವ್ಯದಲ್ಲಿ ನಿರ್ದುಷ್ಟವಾದುದು ಯಾವುದು ತಮ್ಮ ಕಾವ್ಯದ ಯೋಗ್ಯತೆ ಎಷ್ಟು ಕಡಿಮೆ ಎಂಬ ಜ್ಞಾನವೇ ಉಂಟಾಗುವುದಿಲ್ಲ. .............ಇಂತವರು ಅರ್ದಂಬರ್ದದ ಕೆಲಸವನ್ನೇ ಮಾಡಿ ಮುಗಿಸುವರು." "ಫ್ರೆಂಚ್ ಗ್ರಂಥಕಾರರು ವಿಜ್ಞಾನವನ್ನು ಗಳಿಸು ತ್ತಾರೆ. ನಮ್ಮ ಜರ್ಮನ್ ದಡ್ಡರು ವಿಜ್ಞಾನಕ್ಕಾಗಿ ದುಡಿದರೆ ಕಾವ್ಯ ಶಕ್ತಿ ನಶಿಸುವುದೆಂದು ಅಂಜುವರು. ನಿಜವಾಗಿ ನೋಡಿದರೆ ಯಾವ ಶಕ್ತಿಯೂ ಜ್ಞಾನದಿಂದ ಪುಷ್ಟಿಯಾಗುವುದು. ಜ್ಞಾನದಿಂದಲೇ ಅದು ಉಪಯೋಗಕ್ಕೆ ಬರುವುದು. ಎಲ್ಲಾದರೂ ಹೋಗಲಿ ಬಿಡು. ನಾವು ಇವರಿಗೆ ಹೇಳಿಕೊಡುವಂತಿಲ್ಲ. ಬುದ್ಧಿವಂತನಾದವನು ತಾನೇ ತಿಳಿದು ಕೊಳ್ಳುತ್ತಾನೆ. ಈಗ ಬರೆಯುತ್ತಿರುವ ಹಲವು ತರುಣ ಕವಿಗಳು ನಿಜವಾದ ಕಾವ್ಯ ಶಕ್ತಿ ಉಳ್ಳವರಲ್ಲ. ಜರ್ಮನ್ ಕಾವ್ಯದ ಪ್ರಕೃತ ಕಾಲದ ಔನ್ನತ್ಯದಿಂದ ಉದ್ರಿಕ್ತವಾಗಿ ಸ್ವಲ್ಪ ಕೆಲಸಮಾಡುವ ನೀರಸತೆ ಮಾತ್ರ ಅವರ ಕೃತಿಗಳಲ್ಲಿ ಕಾಣುತ್ತಿದೆ."

೮

ಅಧಿಕ ಪ್ರಸಂಗವನ್ನು ಕಂಡರೆ ಸಹನೆಯಿಲ್ಲದಿದ್ದರೂ ಇವರಿಗೆ ಉತ್ತಮವಾದ ಕೃತಿಯೆಂದರೆ ವಿಶ್ವಾಸವುಂಟು. ಜರ್ಮನಿಯಲ್ಲಿ ಆಗ ಬರುತ್ತಿದ್ದ ಉತ್ತಮ ಕಾವ್ಯಗಳ ಮಾತು ಬಂದಾಗ ಸಂತೋಷಪಡುತ್ತಾ ಇವರು ಎಕರ್‌ಮನ್ನರಿಗೆ ಒಂದುಸಲ ಹೀಗೆಂದು ಹೇಳಿದರು:—"ಹೊಸ ದಾಗಿ ಬರೆಯುವ ಓಜಸ್ವಿಗಳಾದ ಕವಿಗಳ ಕೃತಿಗಳನ್ನು ನೀನು ಅಗತ್ಯ ಓದಿ ಗೌರವಾರ್ಹವಾದ ಕೃತಿ ನಮ್ಮ ಸಾಹಿತ್ಯದಲ್ಲಿ ಯಾವುದು ಬಂದರೂ ಅದನ್ನು ನನಗೆ ತೋರಿಸಬೇಕೆಂದು ಬೇಡುತ್ತೇನೆ. ನಮ್ಮ ಪತ್ರಿಕೆಯಲ್ಲಿ ಅಂಥ ಕೃತಿಗಳನ್ನು ಕುರಿತು ಪ್ರಶಂಸಿಸಿ ಒಳ್ಳೆಯದು ಗುಣಯುಕ್ತ ವಾದದ್ದು ಘನವಾದದ್ದನ್ನು ಸ್ತೋತ್ರಮಾಡಬಹುದು. ನಾನು ಮುದುಕನಾದೆ. ಸಾಲದ್ದಕ್ಕೆ ನೂರು ಕೆಲಸ. ಇದರ ಮಧ್ಯೆ ಇತರರ

ಸಹಾಯವಿಲ್ಲದೆ ಎಷ್ಟೇ ಆಸೆಪಟ್ಟರೂ ನಾನೇ ಈ ಕೆಲಸವನ್ನು ಮಾಡುವುದು ಸಾಧ್ಯವಲ್ಲ.'' ತಮಗೆ ಉತ್ತಮವೆಂದು ಕಾಣದ ಸಂದರ್ಭದಲ್ಲಿಯೂ ಇತರರು ಮೆಚ್ಚಿದ್ದರೆ ಇವರು ಅಂಥ ಕೆಲಸಕ್ಕೆ ಗೌರವವನ್ನು ಕೊಡುವರು. ಇದು ಈ ಮಾತಿನಿಂದ ತಿಳಿಯುತ್ತದೆ. ''ನಾನು ಸಾಮಾನ್ಯವಾಗಿ ದೊಡ್ಡದಾದ ಕಾರ್ಯವನ್ನು ಕಂಡಾಗ ದೊಡ್ಡ ಕಾರಣವಿರಬೇಕೆಂದು ಊಹಿಸುತ್ತೇನೆ. ಊಹಲಾಂಡ್ ಕವಿಯನ್ನು ಇಷ್ಟು ಜನ ಮೆಚ್ಚಿರುವುದರಿಂದ ಅವನಲ್ಲಿ ಏನೋ ಒಂದು ಗುಣವಿರಬೇಕು. ಅವನ ಪದ್ಯಕಾವ್ಯಗಳ ಮಾತು ನಾನು ಏನೂ ಹೇಳಲಾರೆನು. ಅವು ನನಗೆ ಒಪ್ಪಲಿಲ್ಲ. ಆದರೆ ಅವನ ಸಾಂಗತ್ಯಗಳಲ್ಲಿ ನಿಜವಾದ ಕಾವ್ಯಶಕ್ತಿಯು ಕಾಣುತ್ತದೆ. ಅವನ ಕೀರ್ತಿಗೆ ಕಾರಣವಿದೆಯೆಂದು ಆದರಿಂದ ತಿಳಿಯುತ್ತದೆ.'' ಇತರ ಕವಿಗಳನ್ನು ಜನರು ಇವರಿಗೆ ಸಮಾನನೆಂದೂ ಇವರಿಗೆ ಹಿರಿಯರಾದವರು ಎಂದೂ ಹೇಳಿ ಜಗಳ ಹಚ್ಚುವುದಕ್ಕೆ ಯತ್ನಮಾಡಿದ ಸಂದರ್ಭಗಳಲ್ಲಿಯೂ ಇವರು ಸಮಾಧಾನವಾಗಿ ಯೋಗ್ಯತೆಯನ್ನು ಪರಿಶೀಲಿಸುತ್ತಿದ್ದರು. ಷ್ಲೆಗಲ್ ಎಂಬ ವಿಮರ್ಶಕರು ಟೀಯಕ್ ಎಂಬ ಕವಿ ಗಯಟೆಗೆ ಸಮಾನನೆಂದು ಹೇಳಿದ ಮಾತಿಗೆ ಇವರು ಹೀಗೆಂದರು. ''ಟೀಯಕ್ ಕವಿಯನ್ನು ಕಂಡರೆ ನನಗೆ ಬಹಳ ವಿಶ್ವಾಸವಿದೆ. ಒಟ್ಟಿನಲ್ಲಿ ಅವನಿಗೆ ಕೂಡ ನನ್ನ ವಿಷಯದಲ್ಲಿ ವಿಶ್ವಾಸವೇ. ಆದರೂ ನನ್ನ ಅವನ ಸಂಬಂಧವು ಸ್ವಲ್ಪ ವಿಪರೀತ ಸ್ಥಿತಿಗೆ ಬಂದಿತು. ಇದು ನನ್ನ ತಪ್ಪೂ ಅಲ್ಲ. ಅವನದೂ ಅಲ್ಲ. ಇತರ ಕಾರಣಗಳಿಂದ ಉಂಟಾಯಿತು. ಷ್ಲೆಗಲ್ ವಿಮರ್ಶಕರು ಪ್ರಾಬಲ್ಯಕ್ಕೆ ಬಂದಾಗ್ಗೆ ಅವರಿಗೆ ನನ್ನ ಗೋಜಿಗೆ ಬರುವುದಕ್ಕೆ ಸಾಧ್ಯವಾಗಲಿಲ್ಲ. ನನ್ನನ್ನು ತಗ್ಗಿಸುವುದಕ್ಕೆಂದು ನನಗೆ ಪ್ರತಿಯಾಗಿ ಅವರು ಶಕ್ತನಾದ ಮತ್ತೊಬ್ಬನನ್ನು ಕಂಡುಹಿಡಿಯಬೇಕಾಯಿತು. ಟೀಯಕ್ ಶಕ್ತನಾದ ಕವಿ. ನನ್ನ ಜೊತೆಗೆ ಹೋಲಿಸಿ ಅವನನ್ನು ಜನರಿಗೆ ತಕ್ಕಮಟ್ಟಿಗೆ ಶಕ್ತನೆಂದು ತಿಳಿಸಲಿಕ್ಕಾಗಿ ಅವರು ಅವನನ್ನು ಅವನ ಯೋಗ್ಯತೆ ಮೀರಿ ಹೊಗಳಬೇಕಾಯಿತು. ಇದರಿಂದ ನನ್ನ ಮತ್ತು ಟೀಯಕನ ಮೈತ್ರಿಗೆ ಹಾನಿಯುಂಟಾಯಿತು. ಅಂತ ಉದ್ದೇಶವಿಲ್ಲದೆಯೇ ಅವನು ನನ್ನ ವಿಷಯ

ದಲ್ಲಿ ಅಸೂಯೆಯಿಂದ ಕಲುಷಿತವಾದ ಸ್ಥಿತಿಯಲ್ಲಿ ನಿಂತನು...... ಟೇಯುಕ್ ಕವಿಯ ಕಾವ್ಯ ಬಹು ಮುಖ್ಯವಾದದ್ದು, ಬಹು ಸಹಜ ಕವಿತೆ. ಅವನ ಅಪೂರ್ವ ಗುಣಗಳನ್ನು ನಾನು ಗಣಿಸುವುದಕ್ಕಿಂತ ಹೆಚ್ಚಾಗಿ ಇನ್ನು ಯಾರೂ ಗಣಿಸರು. ಆದರೆ ಅವನನ್ನು ಅವನ ಸ್ಥಾನದಿಂದ ಮೇಲಕ್ಕೆ ಎಳೆದು ನನ್ನ ಜೊತೆಯೆಂದರೆ ಮಾತ್ರ ತಪ್ಪು ಮಾತಾಗುತ್ತದೆ. ಇದನ್ನು ನಾನು ಸ್ಪಷ್ಟವಾಗಿ ಹೇಳುತ್ತೇನೆ. ಇದರಿಂದ ನನಗೆ ಆಗಬೇಕಾದ ದ್ದೇನೂ ಇಲ್ಲ. ನನ್ನನ್ನು ನಾನೇ ಮಾಡಿಕೊಳ್ಳಲಿಲ್ಲ. ಷೇಕ್ಸ್‌ಪಿಯರ್ ತನ್ನನ್ನು ತಾನೇ ಮಾಡಿಕೊಳಲಿಲ್ಲ. ಅವನು ನನಗಿಂತ ಎತ್ತರದ ತರ ಗತಿಯ ಕವಿ. ನಾನು ಅವನನ್ನು ಗೌರವದಿಂದ ಕಾಣಬೇಕು. ನಾನು ಅವನಿಗೆ ಸಮಾನನೇ? ಟೇಯುಕ್ ಕವಿಯನ್ನು ನನಗೆ ಸಮಾನನೆಂದು ನಾನು ಒಪ್ಪುವುದಾದರೆ ನಾನು ಷೇಕ್ಸ್‌ಪಿಯರಿಗೆ ಸಮನೆಂದು ಹೇಳಿ ದಂತಾಗುವುದು.'' ಇದೆಲ್ಲ ವಿಮರ್ಶಕರ ತಪ್ಪು ಎಂದು ಗಯುಟೆಯುವರು ಬಲ್ಲರು. ವಿಮರ್ಶಕರೂ ಕವಿಗಳೂ ಉತ್ತಮವಾದದ್ದನ್ನು ನಿರಾಕರಿಸಿ ಸಾಮಾನ್ಯವಾದದ್ದಕ್ಕೆ ಹೆಚ್ಚು ಗುಣಗಳನ್ನು ಆರೋಪಿಸುವ ವಿಷಯ ವನ್ನು ಕುರಿತು ಇವರು ಹೀಗೆಂದರು:—''ಮನುಷ್ಯನು ತಾನು ಯಾವು ದನ್ನು ಮಾಡಬಲ್ಲನೋ ಅದರ ಯೋಗ್ಯತೆಯನ್ನು ಮಾತ್ರ ಗುರುತಿಸ ಬಲ್ಲನು. ಸ್ತುತಿಸಬಲ್ಲನು. ಸಾಮಾನ್ಯ ಗುಣಗಳಲ್ಲಿ ಸುಖಿಸುವುದು ಜನದ ಯೋಗ್ಯತೆ. ಇಂಥವರು ಉತ್ತಮವಾದ ಕೃತಿಯಲ್ಲಿ ಸ್ವಲ್ಪ ದೋಷ ಕಂಡರೂ ಅದನ್ನು ನಿರಾಕರಿಸುವರು.'' ವಿಮರ್ಶಕನು ಕವಿಗೆ ಏನು ಹೇಳಬೇಕೆಂದು ಒಂದುಸಲ ಇವರು ಹೀಗೆ ಸೂಚಿಸಿದರು:—''ಈ ವಿಮರ್ಶಕನು ಹೋಗಿರುವುದು ತಪ್ಪು ದಾರಿ. ಇವನು ಕವಿಗೆ ಈ ಕೆಲಸ ವನ್ನು ಮಾಡು ಎಂದು ತೋರಿಸುವ ಪ್ರಯತ್ನಮಾಡಿದಾನೆ. ಇದು ಸರಿಯಲ್ಲ. ಇದರಿಂದ ಕವಿಗೆ ಸಹಾಯವಾಗುವುದಿಲ್ಲ. ಸಾಮಾನ್ಯ ವಾಗಿ ಕವಿಯನ್ನು ಕುರಿತು ನೀನು ಈ ಕೆಲಸವನ್ನು ಮಾಡಬೇಕಾಗಿತ್ತು, ಆ ಕೆಲಸವನ್ನು ಮಾಡಬೇಕಾಗಿತ್ತು ಎಂಬು ಹೇಳುವಷ್ಟು ಅವಿವೇಕ ಬೇರೆ ಇಲ್ಲ. ನಾನು ಹೇಳುತ್ತಿರುವುದು ಬಹುಕಾಲದ ಅನುಭವದ ಮಾತು. ಯಾವ ಕವಿಯನ್ನೇ ಆಗಲಿ ಪ್ರಕೃತಿ ಏನು ಮಾಡಿರು

ವುದೋ ಅದು ಹೊರತು ಬೇರೆಯಾಗಿ ಮಾಡುವುದು ನಮಗೆ ಸಾಧ್ಯವಲ್ಲ. ಬೇರೆಯುತ್ತರನಾಗೆಂದು ಅವನನ್ನು ನೀನು ಬಲಾತ್ಕರಿಸಿದರೆ ಅವನು ನಶಿಸುವನು.''

೬

ಅಸೂಯಾಗ್ರಸ್ತರಾದ ಜನರು ಗಯಟೆಯವರಿಗೆ ದೇಶವಾತ್ಸಲ್ಯವಿಲ್ಲವೆಂದು ಹೇಳುತ್ತಿದ್ದರು. ಒಂದುಸಲ ಎಕರ್‌ಮನ್:—''ನೆಪೋಲಿಯನ್ ನಮ್ಮ ನೀಮೆಯನ್ನು ಮುತ್ತಿದ ಕಾಲದಲ್ಲಿ ನೀವು ಆಯುಧವನ್ನು ಧರಿಸಲಿಲ್ಲವೆಂದೂ, ಆಯುಧವನ್ನು ಧರಿಸದಿದ್ದರೆ ಹೋಗಲಿ ಕಾವ್ಯದಲ್ಲಿಯಾದರೂ ದೇಶವಾತ್ಸಲ್ಯವನ್ನು ತೋರಿ ಜನರನ್ನು ಹುರುಪುಗೊಳಿಸಲಿಲ್ಲವೆಂದೂ ಜನರು ನಿಮ್ಮಲ್ಲಿ ತಪ್ಪು ಹುಡುಕುತ್ತಾರೆ'' ಎಂದು ಹೇಳಿದರು. ಅದಕ್ಕೆ ಗಯಟೆಯವರು:—''ಆ ಮಾತು ಬೇಡ ಬಿಡಣ್ಣ. ಜನವೆನ್ನುವುದು ಮರುಳು. ಅದು ತನ್ನ ಮನಸ್ಸನ್ನು ತಾನೇ ಅರಿಯದು. ಅದರಿಷ್ಟದಂತೆ ಅದನ್ನು ಬಿಡಬೇಕು. ದ್ವೇಷವಿಲ್ಲದೆ ನಾನು ಆಯುಧವನ್ನು ಹೇಗೆ ಹಿಡಿಯಲಿ? ಯೌವನವಿಲ್ಲದೆ ದ್ವೇಷಿಸಲಿ ಹೇಗೆ? ನಾನು ಇಪ್ಪತ್ತು ವರ್ಷದ ಮನುಷ್ಯನಾಗಿದ್ದಾಗ ಆ ಸಂದರ್ಭ ಒದಗಿದ್ದರೆ ಆಯುಧ ಹಿಡಿಯುವವರಲ್ಲಿ ನಾನು ಹಿಂದೆ ಇರುತ್ತಿರಲಿಲ್ಲ. ಆದರೆ ಅದು ಒದಗಿದ್ದು ನನ್ನ ಅರುವತ್ತು ವರ್ಷ ಕಳೆದಮೇಲೆ.

''ಅಲ್ಲದೆ ನಾವೆಲ್ಲ ನಮ್ಮ ನೀಮೆಗೆ ಒಂದೇ ರೀತಿಯ ಸೇವೆಯನ್ನು ಮಾಡಲಾಗುವುದಿಲ್ಲ. ಅವನವನು ಅವನಿಗೆ ದೇವರು ಕೊಟ್ಟಿರುವ ಶಕ್ತಿಗೆ ಅನುಗುಣವಾಗಿ ತನ್ನ ಕೈಯಲ್ಲಾದಷ್ಟನ್ನು ಮಾಡುವನು. ಅರ್ಧ ಶತಮಾನದಷ್ಟು ಕಾಲ ನಾನೂ ದುಡಿದಿದೇನೆ. ನಾನು ಮಾಡಬೇಕೆಂದು ನಿಯತವಾದ ಕಾರ್ಯದಲ್ಲಿ ನಾನು ಹಗಲಾಗಲಿ ರಾತ್ರಿಯಾಗಲಿ ವಿರಾಮವನ್ನು ತೆಗೆದುಕೊಂಡಿಲ್ಲ. ಸದಾ ಯತ್ನದಲ್ಲಿಯೇ ಇದ್ದೇನೆ, ಸದಾ ಪರೀಕ್ಷಿಸಿದೇನೆ. ನನ್ನ ಕೈಯಲ್ಲಾದಷ್ಟು ಕೆಲಸವನ್ನು ಆದಷ್ಟು ಚೆನ್ನಾಗಿ ಮಾಡಿದೇನೆ. ಒಬ್ಬೊಬ್ಬನೂ ತನ್ನ ವಿಷಯ ಇಷ್ಟು ಹೇಳಬಲ್ಲನಾದರೆ ಸಾಕು'' ಎಂದರು. ಇದಕ್ಕೆ ಎಕರ್‌ಮನರು:—''ನೀವು ಹಿರಿಯರಾದ್ದರಿಂದ ನೀವು ಮಾಡಿರುವ ಇತರ ಕೆಲಸದೊಂದಿಗೆ ಇದನ್ನೂ ಮಾಡಬೇಕಾ

ಗಿತ್ತೆಂದು ಅಲ್ಲವೆ ಜನರ ಅಭಿಪ್ರಾಯ. ಇದರಿಂದ ಅವರು ತಮ್ಮ ವಿಷಯ ದಲ್ಲಿ ಗೌರವವನ್ನು ಸೂಚಿಸಿದಂತೆಯೇ ಆಯಿತು.'' ಎನ್ನಲಾಗಿ, ಗಯುಟೆ ಯವರು :—

''ನನ್ನ ಮನಸ್ಸಿಗೆ ತೋರುವುದನ್ನು ನಾನು ಬಿಚ್ಚಿ ಹೇಳುವುದಿಲ್ಲ. ಆ ದೂಷಣೆಯ ಮಾತಿನಲ್ಲಿ ಅಡಗಿರುವ ಅಸೂಯೆಯನ್ನು ನೀನು ತಿಳಿಯ ಲಾರೆ. ಕೆಲ ಜನರು ಬಹುಕಾಲದಿಂದ ನನ್ನ ವಿಷಯದಲ್ಲಿ ತೋರಿರುವ ವೈರವು ಆ ಮಾತಿನಲ್ಲಿ ಬೇರೇ ರೂಪದಲ್ಲಿ ಕಾಣುತ್ತದೆ. ಇವರು ನನ್ನನ್ನು ನೋಯಿಸಬೇಕೆಂದು ಹೀಗೆಲ್ಲ ಹೇಳುವರು. ಹಲವರು ನನ್ನನ್ನು ನೋಡಿ ಧರಿಸಲಾರರು ಎಂದು ನಾನು ಬಲ್ಲೆ. ಸಾಧ್ಯವಾದರೆ ಅವರು ನನ್ನನ್ನು ಭೂಮಿಯಮೇಲೆ ಇಲ್ಲದಹಾಗೆ ಮಾಡಿಯಾರು. ನನ್ನ ಶಕ್ತಿಯನ್ನು ಅಲ್ಲಗಳೆಯುವುದಕ್ಕೆ ಅವಕಾಶವಿಲ್ಲವಾದ್ದರಿಂದ ಇವರು ನನ್ನ ನಡತೆ ಯನ್ನು ಅಲ್ಲಗಳೆಯುವರು. ಒಂದುಸಲ ನಾನು ಜಂಭಗಾರನೆಂದು ಹೇಳುವರು. ಒಂದುಸಲ ಅಹಂಕಾರಿಯೆನ್ನುವರು. ಬುದ್ಧಿವಂತರಾದ ತರುಣರ ವಿಷಯದಲ್ಲಿ ನನಗೆ ಹೊಟ್ಟೆಯುರಿಯೆನ್ನುವರು. ನಾನು ವಿಷಯಲೋಲುಪನೆನ್ನುವರು. ಕ್ರೀಸ್ತಮತ ವಿರೋಧಿ ಎಂದು ಒಮ್ಮೆ ಹೇಳುವರು. ಒಮ್ಮೆ ನನ್ನ ಸೀಮೆಯಮೇಲೆ ಪ್ರೀತಿಯಿಲ್ಲದವನೆನ್ನುವರು. ನನ್ನವರಾದ ನನ್ನ ಒಲುಮೆಯ ಜರ್ಮನ್ ಜನದ ಮೇಲೆ ನನಗೆ ಪ್ರೀತಿಯಿಲ್ಲವಂತೆ....ಜರ್ಮನಿಯಲ್ಲಿ ಕವಿಯಾದವನು ಜರ್ಮನಿಯ ಯಜ್ಞಪಶು. ಹೌದು. ಇದು ನಿಜ ನೋಡು. ಇಷ್ಟಕ್ಕೆ ನಾನು ಮಾತ್ರ ಇದಕ್ಕೆ ದುಃಖಿಸಬೇಕಾದ್ದಿಲ್ಲ. ಇತರರ ಅವಸ್ಥೆ ಇದಕ್ಕಿಂತ ಮೇಲಾಗಿಲ್ಲ. ಅನೇಕರ ಪಾಡು ಇನ್ನೂ ಕೇಡು. ಇಂಗ್ಲೆಂಡು ಫ್ರಾನ್ಸಿನಲ್ಲಿಯೂ ಹೀಗೆಯೇ....ಕದನದ ಗೀತೆಗಳನ್ನು ಬರೆಯುತ್ತ ಕೊಠಡಿಯಲ್ಲಿ ಕೂತಿರಬೇಕಂತೆ. ಇದು ನನ್ನ ಕರ್ತವ್ಯವಾಗಿತ್ತಂತೆ. ರಣರಂಗದ ಬಳಿಯ ಪಾಳೆಯದಲ್ಲಿ ಹಗೆಯಕಡೆಯ ಹೇಷಾರವವನ್ನು ಕೇಳುತ್ತ ಯುದ್ಧಗೀತೆಗಳನ್ನು ಬರೆಯುವುದು ನ್ಯಾಯದ ಮಾತು. ಅದು ನನ್ನ ಬಾಳಾಗಲಿಲ್ಲ, ನನ್ನ ಕೆಲಸವಾಗಲಿಲ್ಲ. ಥಿಯಡೋರ್ ಕೋರ್ನರನ ದಾಯಿತು. ರಣ ಗೀತಗಳು ಅವನಿಗೆ ತಕ್ಕುವು. ನಾನು ರಣಪ್ರಿಯನಲ್ಲ,

ರಣೋನ್ಮುಖನಲ್ಲ. ನಾನು ರಣಗೀತಗಳನ್ನು ರಚಿಸಿದ್ದರೆ ಅವು ನನ್ನ ಮುಖಕ್ಕೊಪ್ಪದ ಮೊಗವಾಡದಂತಾಗುತ್ತಿದ್ದುವು."

"ನನ್ನ ಕಾವ್ಯದಲ್ಲಿ ನಾನು ಬರಿಯ ವೇಷಕ್ಕಾಗಿ ಏನನ್ನೂ ಬರೆದದ್ದಿಲ್ಲ. ನನ್ನ ಅನುಭವಕ್ಕೆ ಬಾರದ ಬರೆಯುವಂತೆ ನನ್ನನ್ನು ಬಲಾತ್ಕರಿಸಿದ ಒಂದು ವಿಷಯವನ್ನೂ ನಾನು ಇದುವರೆಗೆ ಬರೆದದ್ದಿಲ್ಲ. ನಾನು ಪ್ರೇಮಗೀತೆಗಳನ್ನು ಬರೆದದ್ದೆಲ್ಲಾ ಪ್ರೇಮವನ್ನು ಅನುಭವಿಸಿದಾಗ. ವೈರವಿಲ್ಲದೆ ವೈರದ ಗೀತೆಗಳನ್ನು ನಾನು ಹೇಗೆ ಬರೆಯಲಿ? ಅಲ್ಲದೆ ನಿನಗೆ ಮಾತ್ರ ಹೇಳುತ್ತೇನೆ ಕೇಳು. ಫ್ರೆಂಚ್ ಜನರು ಹೊರಟು ಹೋದಾಗ ನನಗೇನೋ ಸಂತೋಷ. ಆದರೆ ಅವರ ವಿಷಯದಲ್ಲಿ ನನಗೆ ವೈರವಿಲ್ಲ. ನನ್ನ ಮನಸ್ಸಿಗೆ ಜೀವನದಲ್ಲಿ ಮುಖ್ಯವೆಂದು ತೋರುವುದು ವಿನಯ ಅಥವಾ ಅವಿನಯ. ಫ್ರೆಂಚರು ಪ್ರಪಂಚದ ವಿನೀತ ಜನಾಂಗಗಳಲ್ಲಿ ಪ್ರಮುಖರು. ನನ್ನ ವಿನಯದ ಬಹುಭಾಗ ನನಗೆ ಅವರಿಂದ ಬಂದದ್ದು. ನಾನು ಅವರಲ್ಲಿ ಹೇಗೆ ವೈರ ತೋರಲಿ? ಮೊತ್ತದಲ್ಲಿ ಜನಾಂಗಗಳ ಮೇಲೆ ದ್ವೇಷ ತೋರುವುದು ಒಂದು ವಿಜಾತೀಯ ಗುಣ. ತಿಳಿವಳಿಕೆ ಕಡಿಮೆಯಾದವರಲ್ಲಿ ಅದು ಬಹು ಬಲವಾಗಿರುವುದು, ಉಗ್ರವಾಗಿರುವುದು. ತಿಳಿವಳಿಕೆ ಹೆಚ್ಚಿದಹಾಗೆ ಒಂದು ಅಂತಸ್ತಿನಲ್ಲಿ ಮನುಷ್ಯನು ಜನಾಂಗವೆನ್ನುವ ಮಟ್ಟವನ್ನು ಮೀರಿ ಇರುತ್ತಾನೆ. ಆಗ ಅವನಿಗೆ ಜನಾಂಗವಿದ್ವೇಷವು ಸಾಧ್ಯವಲ್ಲ. ಈ ಅವಸ್ಥೆಯಲ್ಲಿ ನೆರೆಯ ಜನಾಂಗದ ಕಷ್ಟಸುಖವು ನಮಗೆ ನಮ್ಮವರ ಕಷ್ಟಸುಖದಂತೆಯೇ ತೋರುವುದು. ಇಂಥ ಅವಸ್ಥೆ ನನ್ನ ಸ್ವಭಾವಕ್ಕೆ ಅನುಗುಣವಾದದ್ದು. ನನ್ನ ಅರುವತ್ತು ವಯಸ್ಸಿಗೆ ಬಹಳ ಹಿಂದೆಯೇ ನಾನು ಈ ಸ್ಥಿತಿಗೆ ಬಂದುಬಿಟ್ಟಿದ್ದೆನು." ಕವಿಯಾದವನ ದೇಶವಾತ್ಸಲ್ಯವು ಯಾವ ರೂಪದಲ್ಲಿ ಕಾಣುತ್ತದೆಂಬುದನ್ನು ಇವರು ಇನ್ನೊಂದು ಸಂದರ್ಭದಲ್ಲಿ ಹೀಗೆ ಸೂಚಿಸಿದರು. "ಕವಿಯಾದವನು ಇತರರಂತೆ ಮನುಷ್ಯನು. ಇತರರಂತೆ ಒಂದು ದೇಶದ ಪ್ರಜೆ. ಈ ಕಾರಣದಿಂದ ಅವನು ತನ್ನ ದೇಶವೆಂದರೆ ಪ್ರೀತಿ ತೋರುವನು. ಆದರೆ ಅವನ ಕಾವ್ಯದ ದೇಶವು ಸದ್ಗುಣ, ಸದಾಚಾರ, ಸೌಂದರ್ಯ. ಇವು ಯಾವ ಒಂದು ನಾಡಿಗೂ ಸೇರಿದುವಲ್ಲ. ಇವು

ಎಲ್ಲಿದ್ದರೆ ಅಲ್ಲಿ ಕವಿಯು ಅವನ್ನು ಸ್ವೀಕರಿಸುತ್ತಾನೆ. ಕಾವ್ಯವಸ್ತು ವಾಗಿ ತಿದ್ದುತ್ತಾನೆ. ಅಲ್ಲದೆ ತನ್ನ ನಾಡನ್ನು ಪ್ರೀತಿಸುವುದೆಂದರೇನು? ದೇಶವಾತ್ಸಲ್ಯದ ಕಾರ್ಯವೆಂದರೇನು? ಕವಿಯಾದವನು ತನ್ನ ಜನದಲ್ಲಿರುವ ಹಾನಿಕರವಾದ ಅಜ್ಞಾನವನ್ನೂ ಸಂಕುಚಿತ ಬುದ್ಧಿಯನ್ನೂ ಕಳೆದು ಅವರ ಮನಸ್ಸನ್ನು ವಿಕಾಸಗೊಳಿಸಿ ಅವರ ರುಚಿಯನ್ನು ಶುದ್ಧಿಮಾಡಿ ಅವರ ಭಾವನೆಗಳನ್ನೂ ಯೋಚನೆಗಳನ್ನೂ ಉನ್ನತವಾಗಿ ಮಾಡಿದರೆ ಸಾಲದೆ? ಇದಕ್ಕಿಂತ ಉತ್ತಮವಾದ ದೇಶಸೇವೆಯೇನನ್ನು ಮಾಡ ಬಹುದು? ಇನ್ನಿದಕ್ಕಿಂತಲೂ ಹೆಚ್ಚಿನ ದೇಶವಾತ್ಸಲ್ಯದ ಕಾರ್ಯ ಯಾವುದು?"

೧೦

ಕಾವ್ಯದಲ್ಲಿ ಲಕ್ಷಣಕ್ಕೆ ಹೆಚ್ಚು ಗಮನಕೊಡುವ ವಿಷಯವನ್ನು ಕುರಿತು ಇವರು ಒಮ್ಮೆ ಹೀಗೆ ಹೇಳಿದರು. "ಈಚೆಗೆ ಈ ಲಕ್ಷಣ ಗಳಿಗೇ ಬಹಳ ಪ್ರಮುಖತೆ ಬಂದಿದೆ. ಈ ಅಕ್ಷರದ ಜತೆಗೆ ಈ ಅಕ್ಷರ ಪ್ರಾಸವಾಗಿ ಬರಬಹುದೇ ಕೂಡದೇ ಇದಕ್ಕೆ ಇದು ಸರಿಯಾದ ಪ್ರಾಸವೇ ಎಂದು ಒದ್ದಾಡುವುದರಲ್ಲೇ ವಿಮರ್ಶಕರು ಕಾಲ ಕಳೆಯು ತ್ತಾರೆ. ನಾನು ಇನ್ನೂ ಸಣ್ಣವನಾಗಿ ಧೈರ್ಯಶಾಲಿಯಾಗಿದ್ದಿದ್ದರೆ ಇವರ ಈ ಶಾಸ್ತ್ರ ಗೀಸ್ತ್ರವನ್ನೆಲ್ಲಾ ಬೇಕೆಂತಲೇ ಅತಿಕ್ರಮಿಸುತ್ತಿದ್ದೆನು. ಸ್ವರಸಾಮರಸ್ಯವನ್ನು ಹೆಚ್ಚು ಕಡಿಮೆಯ ಪ್ರಾಸವನ್ನು ಇನ್ನೇನೇನು ತೋರಿದರೆ ಅದೆಲ್ಲವನ್ನೂ ಪ್ರಯೋಗಿಸಿ ಕಾವ್ಯದ ಮುಖ್ಯ ಲಕ್ಷಣವನ್ನು ಬಿಡದಂತೆ ಸೊಗಸಾದ ವಿಷಯವನ್ನು ಬರೆಯುತ್ತಿದ್ದೆನು. ಶಾಸ್ತ್ರ ಗೀಸ್ತ್ರ ವೆನ್ನುವವರೆಲ್ಲ ಅವುಗಳನ್ನು ಓದುವಂತೆ ಮಾಡುತ್ತಿದ್ದೆನು.

"ರಚನೆಯನ್ನು ಕುರಿತ ಈ ಸಣ್ಣ ವಿಷಯಗಳಲ್ಲಿ ಬಹಳ ಪ್ರವೇಶ ಮಾಡುವುದು ಕಾಲವು ಬಂಜೆಯೆಂಬುದನ್ನು ಸೂಚಿಸುತ್ತದೆ. ಕವಿ ಯಾದವನು ಕಾವ್ಯ ಬರೆಯುವ ಬದಲು ಈ ರೀತಿ ವಿಚಾರದಲ್ಲಿ ತೊಡಗಿದ ನಾದರೆ ಅವನಲ್ಲಿ ಕಾವ್ಯ ಕಡಿಮೆ ಎಂದು ಊಹಿಸಬಹುದು..."

ಶೈಲಿಯ ರಹಸ್ಯವನ್ನು ಇವರು ಒಂದು ಸಂದರ್ಭದಲ್ಲಿ ಈ ಮಾತು ಗಳಲ್ಲಿ ವಿವರಿಸಿದರು. "ಮೊತ್ತದಲ್ಲಿ ತತ್ತ್ವವಿಚಾರವು ನಮ್ಮ ಜರ್ಮನ್

ಜನರ ಶೈಲಿಗೆ ಬಾಧೆಯನ್ನು ತಂದಿದೆ. ಅದರಿಂದ ನಮ್ಮ ಶೈಲಿಯು
ಅಸ್ಪಷ್ಟವೂ ಕ್ಲಿಷ್ಟವೂ ದುರ್ವೇದ್ಯವೂ ಆಗಿದೆ......ಇಂಗ್ಲೀಷ್ ಜನರು
ಸಾಮಾನ್ಯವಾಗಿ ಚೆನ್ನಾಗಿಯೇ ಬರೆಯುತ್ತಾರೆ. ಸ್ವಭಾವತಃ ಅವರು
ವಾಚಾಲರು, ಕಾರ್ಯಶಾಲಿಗಳು, ವಸ್ತುಸ್ಥಿತಿಯನ್ನು ಮರೆಯರು. ಫ್ರೆಂಚ್
ಜನರು ಶೈಲಿಯಲ್ಲಿ ತಮ್ಮ ಸಾಮಾನ್ಯ ಸ್ವಭಾವಕ್ಕೆ ಅನುಗುಣವಾಗಿಯೇ
ಇದಾರೆ. ಅವರಿಗೆ ಜನ ಬೇಕು. ಆದ್ದರಿಂದ ಯಾರಿಗಾಗಿ ಬರೆಯುತ್ತಿದ್ದೇ
ವೆಂಬುದನ್ನು ಅವರು ಮರೆಯುವುದೇ ಇಲ್ಲ. ಓದುವವನ ಮನಸ್ಸು
ಒಪ್ಪಲೆಂದು ಅವರು ಬರವಣಿಗೆಯನ್ನು ಸ್ಪಷ್ಟಮಾಡುತ್ತಾರೆ. ಅವನಿಗೆ
ಹರ್ಷವಾಗಲೆಂದು ಹಿತವಾಗಿ ಬರೆಯುತ್ತಾರೆ....ಮೊತ್ತದಲ್ಲಿ ಬರಹ
ಗಾರನ ಶೈಲಿಯು ಅವನ ಮನಸ್ಸನ್ನು ಅನುಸರಿಸುತ್ತದೆ. ಯಾವ
ನಾದರೂ ಸ್ಪಷ್ಟವಾದ ಶೈಲಿಯಲ್ಲಿ ಬರೆಯಲಪೇಕ್ಷಿಸಿದರೆ ಅವನು ತನ್ನ
ಯೋಚನೆಗಳನ್ನು ಸ್ಪಷ್ಟವಾಗಿ ಮಾಡಿಕೊಳ್ಳಲಿ. ಉದಾತ್ತವಾದ ಶೈಲಿ
ಯಲ್ಲಿ ಬರೆಯಲೆಳಸಿದರೆ ತನ್ನ ಜೀವನವನ್ನು ಉದಾತ್ತವಾಗಿ ಮಾಡಿ
ಕೊಳ್ಳಲಿ.''

ನಿಜವಾದ ನೀತಿಗೆ ವಿರೋಧವಾಗಿಲ್ಲದಿದ್ದರೂ ವಾಡಿಕೆಯ ನೀತಿಗೆ
ವಿರೋಧವಾಗಿ ಕಾಣಬಹುದಾದ ತನ್ನ ಎರಡು ಕಾವ್ಯಗಳನ್ನು ಕುರಿತು
ಮಾತನಾಡುತ್ತಾ ಕಾವ್ಯವು ನೀತಿಯನ್ನು ಪ್ರತಿಪಾದಿಸುವ ವಿಷಯದಲ್ಲಿ
ಇವರು ಹೀಗೆ ಹೇಳಿದರು. ''ತಿಳಿವಳಿಕೆಯೂ ಸಂಸ್ಕಾರವೂ ಎಲ್ಲರಿಗೂ
ಉಂಟಾದರೆ ಕವಿಯಾದವನು ತನ್ನ ಕೆಲಸವನ್ನು ಧಾರಾಳವಾಗಿ ಮಾಡ
ಬಹುದು. ಆಗ್ಗೆ ಅವನು ತನಗೆ ಸರಿಯೆಂದು ತೋರಿದ್ದನ್ನೇ ಬರೆಯ
ಬಹುದು; ತನಗೆ ಉತ್ತಮವೆಂದು ಕಂಡದ್ದನ್ನು ಹೇಳುವುದಕ್ಕೆ ಭಯ
ಪಡದೆ ಇರಬಹುದು. ಈಗಲಾದರೆ ಅವನು ಒಂದು ಮಟ್ಟದಲ್ಲಿ ನಿಲ್ಲ
ಬೇಕು. ತಿಳಿದವರೂ ತಿಳಿಯದವರೂ ಇರುವ ಜನಸಮುದಾಯದ
ಕೈಗೆ ತನ್ನ ಗ್ರಂಥ ಸೇರುವುದೆಂಬುದನ್ನು ಜ್ಞಾಪಕದಲ್ಲಿಟ್ಟುಕೊಳ್ಳಬೇಕು.
ತನ್ನ ಭಾವವನ್ನು ತೀರಾ ಸ್ಪಷ್ಟವಾಗಿ ಹೇಳಿದರೆ ಸಜ್ಜನರಾದ ಕೆಲವರಿಗೆ
ನೋವು ಉಂಟಾದೀತೆಂದು ಎಚ್ಚರಿಕೆಯಿಂದ ನಡೆದುಕೊಳ್ಳಬೇಕು.
ಅಲ್ಲದೆ ಕಾಲವೂ ವಿಚಿತ್ರವಾದ ಒಂದು ಕಠಿನ ಶಾಸನವನ್ನು ಮಾಡುತ್ತದೆ.

ಒಂದೊಂದು ಶತಮಾನದಲ್ಲಿಯೂ ಕವಿಯ ಮಾತಿಗೆ ಅದು ಬೇರೆ ಬೇರೆಯ ಎಲ್ಲೆಯನ್ನು ನಿಯಮಿಸುತ್ತದೆ. ಪೂರ್ವದ ಗ್ರೀಕರು ಹೇಳಬಹುದಾಗಿದ್ದ ಮಾತನ್ನು ಈಗ ನಾವು ಹೇಳುವಂತಿಲ್ಲ. ಷೇಕ್ಸ್‌ಪಿಯರ್ ಕಾಲದ ಇಂಗ್ಲೀಷರಿಗೆ ಸರಿಹೋದ ಮಾತು ಈಗಣ ಇಂಗ್ಲೀಷರಿಗೆ ವ್ಯಂಗ್ಯವಾಗಿ ಕಾಣುತ್ತದೆ. ಈ ಕಾರಣದಿಂದ ಈಗ ಸಂಸಾರಿಗಳಿಗಾಗಿ ಷೇಕ್ಸ್‌ಪಿಯರನ್ನು ತಿದ್ದಿ ಅಚ್ಚು ಹಾಕಿಸಬೇಕಾಗಿದೆ.''

ಕಾವ್ಯದ ಪದ್ಧತಿಯನ್ನು ಕುರಿತು ಇವರು ಹಲವು ಮಾತುಗಳನ್ನು ಹೇಳಿದಾರೆ. ಒಂದೇ ಕಾವ್ಯದಲ್ಲಿ ಅಥವಾ ಚಿತ್ರದಲ್ಲಿ ಪರಸ್ಪರ ವಿರೋಧವಾದ ಭಾವಗಳು ಅಲ್ಲಲ್ಲಿ ಕಾಣುತಿರುವ ಸಂದರ್ಭಗಳನ್ನು ಕುರಿತು ಇವರು ಹೀಗೆಂದರು. ''ಇಂಥ ಸಂದರ್ಭಗಳು ಹನ್ನೆರಡನ್ನು ನಾನು ಷೇಕ್ಸ್‌ಪಿಯರಿನ ನಾಟಕಗಳಲ್ಲಿ ತೋರಿಸಬಲ್ಲೆನು. ಮ್ಯಾಕ್‌ಬೆತ್ ನಾಟಕವನ್ನು ನೋಡು. ಲೇಡೀ ಮ್ಯಾಕ್‌ಬೆತ್ತಳು ತನ್ನ ಪತಿಗೆ ಧೈರ್ಯ ಕೊಡಬೇಕಾದ ಸಮಯದಲ್ಲಿ ತಾನು ಇಂತ ಅಂತ ಮಕ್ಕಳಿಗೆ ಮೊಲೆ ಯೂಡಿದೇನೆನ್ನುವಳು. ಅವಳಿಗೆ ಮಕ್ಕಳಿದ್ದರೋ ಇಲ್ಲವೋ ನಮಗೆ ತಿಳಿಯದು. ಆದರೆ ಅವಳು ಆ ಮಾತನ್ನು ಹೇಳುತ್ತಾಳೆ. ಅಲ್ಲಿ ಹೇಳಲೂ ಬೇಕು. ಅದರಿಂದ ಅವಳ ಆ ಭಾಷಣಕ್ಕೆ ತೇಜಸ್ಸು ಬರುತ್ತದೆ. ನಾಟಕದಲ್ಲಿ ಮುಂದೆ ಮ್ಯಾಕ್‌ಡಫನು ತನ್ನ ಮಕ್ಕಳು ತೀರಿಹೋದ ವಿಷಯವನ್ನು ಕೇಳಿದಾಗ ಮ್ಯಾಕ್‌ಬೆತ್ತನ್ನು ಮಕ್ಕಳಿಲ್ಲದ ಪಾಪಿಯೆನ್ನುವನು. ಲೇಡೀ ಮ್ಯಾಕ್‌ಬೆತ್ ಹೇಳಿದ್ದಕ್ಕೂ ಇವನು ಹೇಳಿದ್ದಕ್ಕೂ ವ್ಯತ್ಯಾಸವಾಯಿತು. ಆದರೆ ಷೇಕ್ಸ್‌ಪಿಯರು ಇದನ್ನು ಲಕ್ಷ್ಯಮಾಡಲಿಲ್ಲ. ಆಯಾ ಭಾಷಣ ಅಲ್ಲಲ್ಲಿ ತೇಜಸ್ವಿಯಾಗಬೇಕೆಂಬುದು ಅವನ ಮುಖ್ಯ ಉದ್ದೇಶ. ಮೊದಲಲ್ಲಿ ಲೇಡೀ ಮ್ಯಾಕ್‌ಬೆತ್ತಳು ತನ್ನ ಭಾವವನ್ನು ಬಲಪಡಿಸುವುದಕ್ಕೆ ಮಕ್ಕಳಿಗೆ ಮೊಲೆಯೂಡಿದ ಮಾತನ್ನಾಡುವಳು. ಆಮೇಲೆ ಮ್ಯಾಕ್‌ಡಫನು ತನ್ನ ಭಾವವನ್ನು ಬಲಪಡಿಸುವುದಕ್ಕೆ ಅವಳಿಗೆ ಮಕ್ಕಳಿಲ್ಲವೆನ್ನುವನು.

''ಚಿತ್ರಕಾರನ ಗೆರೆಗಳನ್ನೂ ಕವಿಯ ಮಾತುಗಳನ್ನೂ ನಾವು ಒಂದೊಂದಾಗಿ ತೆಗೆದುಕೊಂಡು ಪರೀಕ್ಷೆಯನ್ನು ನಡೆಯಿಸಬಾರದು.

ಧೀರವಾದ ಸ್ವೇಚ್ಛವಾದ ರೀತಿಯಲ್ಲಿ ಬರೆದಿರುವ ಕೃತಿಯನ್ನು ಒಟ್ಟಿನಲ್ಲಿ ನೋಡಿ ಸಾಧ್ಯವಾದಲ್ಲಿ ಬರೆದವನ ಆ ಧೀರವಾದ ಸ್ವೇಚ್ಛವಾದ ರೀತಿಯಿಂದಲೇ ಅದನ್ನು ಅನುಭವಿಸಿ ಸುಖಪಡಬೇಕು."

ವರ್ಣನೆಗೆ ಹೊರಟ ಸಂದರ್ಭ ಮರೆತು ವರ್ಣಿಸುವುದು ದೋಷವಾಗುತ್ತದೆಂಬುದನ್ನು ಇವರು ಒಂದು ಸಲ ಹೀಗೆ ತೋರಿಸಿದರು. ಸ್ಕಾಟ್ ಕವಿಯ ನಾವೆಲುಗಳ ವಿಷಯದಲ್ಲಿ ಇವರಿಗೆ ಬಹಳ ಮರ್ಯಾದೆ. ಆದರೆ ಅದೇ ಕವಿಯು ಮಾಡಿದ್ದ ಒಂದು ತಪ್ಪಿನಿಂದ ಅತಿ ವರ್ಣನೆಯ ದೋಷವನ್ನು ಉದಾಹರಿಸಿದರು. "ಸ್ಕಾಟ್ ಕವಿಯಲ್ಲಿ ಇದೊಂದು ವಿಶೇಷ. ವಿವರವಾಗಿ ಬರೆಯುವುದರಲ್ಲಿ ಆತನಿಗಿರುವ ಶಕ್ತಿಯಿಂದ ಅವನ ಕೃತಿಗಳಲ್ಲಿ ಅಲ್ಲಲ್ಲಿ ದೋಷ ಉಂಟಾಗುತ್ತದೆ. ಐವಾನ್‌ಹೋ ಗ್ರಂಥದಲ್ಲಿ ನೋಡು. ಅರಮನೆಯಲ್ಲಿ ರಾತ್ರಿ ಕೆಲವರು ಕುಳಿತಿರುವಲ್ಲಿ ಹೊಸಬನೊಬ್ಬನು ಪ್ರವೇಶಿಸುವನು. ಆಗ ಕವಿಯು ಆ ಬಂದವನ ಆಕೃತಿಯನ್ನೂ ವಸ್ತ್ರಗಳನ್ನೂ ವರ್ಣಿಸುವನು. ಇದು ಸರಿಯಾಯಿತು. ಆಮೇಲೆ ಅವನ ಕಾಲನ್ನೂ ಪಾದರಕ್ಷೆಯನ್ನೂ ಕಾಲಚೀಲವನ್ನೂ ವರ್ಣಿಸುತ್ತಾನೆ. ಇದು ತಪ್ಪು. ರಾತ್ರಿ ಕುಳಿತಿರುವಾಗ ಯಾವನಾದರೂ ಹೊರಗಣಿಂದ ಬಂದರೆ ಅವನ ಮೈಯ ಮೇಲ್ಭಾಗ ಮಾತ್ರ ನಮಗೆ ಕಾಣುವುದು. ಅವನ ಕಾಲನ್ನೂ ನಾವು ವರ್ಣಿಸಿದರೆ ಅಲ್ಲಿಗೆ ಹಗಲ ಬೆಳಕನ್ನು ತಂದಹಾಗಾಯಿತು. ಓದುವವನಿಗೆ ರಾತ್ರಿಯೆಂಬ ಭಾವನೆ ಮರೆಯುತ್ತದೆ."

ಕಾವ್ಯವನ್ನು ಕ್ಲಿಷ್ಟವಾಗಿ ಬರೆದು ಅದಕ್ಕೆ ಕವಿಯೇ ಅರ್ಥ ಬರೆಯುವ ಮಾತಿಗೆ ಇವರು ಹೀಗೆಂದರು. "ಚಿತ್ರಕ್ಕೆ ಹೀಗೆ ಮಾಡಬಹುದು. ಅಲ್ಲಿ ಚಿತ್ರವಾಗಿರುವುದನ್ನು ಇಲ್ಲಿ ಮಾತಿನಲ್ಲಿ ಹೇಳುವೆ. ಕಾವ್ಯಕ್ಕೆ ಇದು ಅನುಕೂಲಿಸುವುದಿಲ್ಲ. ಮಾತಾಗಿಯೇ ಇರುವುದಕ್ಕೆ ಮಾತಿನಿಂದ ಅರ್ಥ ಹೇಳುವುದಾದರೆ ಒಂದು ಮಾತು ಇನ್ನೊಂದು ಮಾತನ್ನು ಮರೆಯಿಸುತ್ತದೆ."

ಆಯಾ ವಯಸ್ಸಿಗೆ ತಕ್ಕ ಗ್ರಂಥಗಳು ಬೇರೆ ಬೇರೆ ತೆರದವು ಇರುವುವೆಂದೂ ಇರಬೇಕೆಂದೂ ಇವರ ಅಭಿಪ್ರಾಯ. "ಸ್ವಲ್ಪ ಬರಟು

ತನವನ್ನೂ ಕಾಣದೆ ಸಣ್ಣವರು ದೊಡ್ಡವರಾಗುವಷ್ಟರ ಮಟ್ಟಿಗೆ ಪ್ರಪಂಚ ನಾಗರಿಕವಾಗುವುದಿಲ್ಲ. ಚಿಕ್ಕವರು ಬರೆದದ್ದು ಚಿಕ್ಕವರಿಗೆ ಚೆನ್ನಾಗಿಯೇ ಇರುತ್ತದೆ. ಪ್ರಪಂಚವು ಒಟ್ಟಿನಲ್ಲಿ ಮುಂದುವರಿದರೂ ಸಣ್ಣವರು ಬದುಕನ್ನು ಆರಂಭಮಾಡುವುದು ಹಿಂದಣವರು ಆರಂಭಿಸಿದ ಆ ಅಂತಸ್ತಿನಲ್ಲೇ. ಸೃಷ್ಟಿಯ ಚರಿತ್ರೆಯೂ ವ್ಯಕ್ತಿಯ ಜೀವನದಲ್ಲಿ ಮರಳಿಯೇ ತೀರುವುದು. ಈಗ ಇದರಿಂದ ನನಗೆ ಆಗ್ರಹ ಬರುವುದಿಲ್ಲ. ನಾನು ಒಂದುಸಲ

ಕಾಮನಕಟ್ಟೆಗೆ ಉರಿಯಲಿ ಎಂದೂ
ಸುಖಕೆಂದಿಗು ಬರಬೇಡ ಕುಂದು
ಹಳೆಯಪರಕೆ ತಲೆಮಾಸದೆ ಇರದು
ಹಸುಮಕ್ಕಳ ಬರ ಲೋಕಕೆ ಬರದು.

ಎಂದು ಪದವನ್ನು ಹಾಡಿದೆನು.

"ಕಿಟಕಿಯಿಂದ ಹೊರಗೆ ನೋಡಿದರೆ ಸಾಕು. ಬೀದಿಯನ್ನು ಗುಡಿಸುತ್ತಿರುವ ಪರಕೆಯಲ್ಲಿಯೂ ಅಲ್ಲಿ ಆಡುತ್ತಿರುವ ಮಕ್ಕಳಲ್ಲಿಯೂ ನಮ್ಮ ಪ್ರಪಂಚದ ಈ ಜೀವನವು ನನಗೆ ಕಾಣುತ್ತದೆ. ಅದು ಸದಾ ಕರಗುತ್ತಿದೆ, ಸದಾ ಮತ್ತೆ ಎಳೆಯದಾಗುತ್ತಿದೆ."

ಕಾವ್ಯದಲ್ಲಿ ಛಂದಸ್ಸು ಒಂದು ಮುಖ್ಯವಾದ ಭಾಗವೆಂದು ಇವರ ಭಾವನೆ. "ಛಂದಸ್ಸಿನಿಂದ ಕಾವ್ಯಾರ್ಹವಾದ ಭಾವನೆಯು ಪುಷ್ಟಿಯಾಗುತ್ತದೆ. ಕೆಲವು ವೇಳೆ ಸೃಷ್ಟಿಯೇ ಆಗುತ್ತದೆ." ಕವಿಯಾದವನು ತನ್ನ ಶಕ್ತಿಯನ್ನು ಅತಿಯಾಗಿ ಉಪಯೋಗಿಸಬಾರದೆಂದು ಇವರ ಅಭಿಪ್ರಾಯ. ವಿಶೇಷವಾಗಿ ಗ್ರಂಥಗಳನ್ನು ಬರೆಯುತ್ತಿದ್ದ ಫ್ರೆಂಚ್ ಕವಿ ವಿಕ್ಟರ್ ಹ್ಯೂಗೋನನ್ನು ಉದ್ದೇಶಿಸಿ ಇವರು "ಒಂದು ವರ್ಷದಲ್ಲಿ ಎರಡು ನಾಟಕ ಒಂದು ನಾವೆಲನ್ನು ಬರೆಯುವಷ್ಟು ಧೃಷ್ಟನಾದ ಕವಿ ಬರಬರುತ್ತ ಕೆಡದೆ ಏನಾಗುತ್ತಾನೆ. ಅವನ ಕಾವ್ಯಶಕ್ತಿ ಎಷ್ಟೇ ಒಳ್ಳೆಯದಾದರೂ ಅವನು ಅದನ್ನು ಹಾಳುಮಾಡುವನು. ಅಲ್ಲದೆಯೆ ಈತನು ಗುಡ್ಡೆ ಗುಡ್ಡೆ ಹಣ ಸಂಪಾದಿಸುವುದಕ್ಕೆಂದು ಗ್ರಂಥಗಳನ್ನು

ರಚಿಸುವಂತೆ ಕಾಣುತ್ತದೆ. ಹಣ ಸಂಪಾದಿಸುವ ಆಸೆ ತಪ್ಪು ಎಂದಲ್ಲ. ಕೀರ್ತಿ ಬೇಕೆನ್ನುವುದು ಕೆಟ್ಟದಲ್ಲ. ಆದರೆ ಬರುವ ಕಾಲದಲ್ಲಿ ತನ್ನ ಹೆಸರು ಉಳಿಯಬೇಕೆನ್ನುವುದಾದರೆ ಈತನು ಕೆಲಸ ಹೆಚ್ಚು ಮಾಡಬೇಕು. ಬರವಣಿಗೆ ಕಡಿಮೆಮಾಡಬೇಕು'' ಎಂದು ಹೇಳಿದರು. ಕಲೆಯ ಅಂಶಗಳನ್ನು ಇವರು ಎಷ್ಟು ಚೆನ್ನಾಗಿ ಬಿಡಿಸಿ ತಿಳಿದಿದ್ದರೆಂದು ಇದರಿಂದ ವ್ಯಕ್ತವಾಗುತ್ತದೆ. ಸುಂದರಿಯಾದ ಒಬ್ಬ ಗಾಯಕಿಯನ್ನು ಕುರಿತು ಎಕರ್‌ಮನ್ ''ಆಕೆ ಬಹಳ ಚೆನ್ನಾಗಿ ಹಾಡುತ್ತಾರಂತೆ'' ಎಂದರು. ಗಯಟೆ—''ಹೌದು.'' ಎಕರ್‌ಮನ್—''ಹುಮೇಲ್‌ರಷ್ಟು ಚೆನ್ನಾಗಿ?'' ಗಯಟೆ—''ನೀನು ಒಂದು ವಿಷಯವನ್ನು ತಿಳಿದುಕೊಳ್ಳಬೇಕು. ಆಕೆ ಚೆನ್ನಾಗಿ ಗಾಯನಮಾಡುವವಳು ಮಾತ್ರವಲ್ಲದೆ ಬಹಳ ಸುಂದರಿಯೂ ಆಗಿದಾಳೆ. ಇದರಿಂದ ಆಕೆ ಏನುಮಾಡಿದರೂ ಮೆಚ್ಚುವಂತಿರುತ್ತದೆ. ಆಕೆಯ ಗಾಯನವೂ ಬಹಳ ಶ್ರೇಷ್ಠವಾಗಿದೆ.''

ಇವರ ಕಾವ್ಯಗಳಲ್ಲಿ ಪ್ರಕೃತಿವರ್ಣನೆಯು ಬಹಳ ಉಚ್ಚ ರೀತಿಯದು. ಇದರ ರಹಸ್ಯವನ್ನು ಇವರು ಒಂದುಸಲ ಹೀಗೆ ವಿವರಿಸಿದರು. ''ಕಾವ್ಯ ಬರೆಯುವ ಉದ್ದೇಶದಿಂದ ನಾನು ಪ್ರಕೃತಿಯನ್ನು ನೋಡಿದ್ದಿಲ್ಲ. ಚಿಕ್ಕಂದು ಚಿತ್ರ ಬರೆಯುವ ಯತ್ನಮಾಡಿದ್ದರಿಂದಲೂ ಆಮೇಲೆ ವಿಜ್ಞಾನದೃಷ್ಟಿಯಿಂದ ಪ್ರಕೃತಿಯನ್ನು ಪರೀಕ್ಷಿಸಿದ್ದರಿಂದಲೂ ನನಗೆ ಪ್ರಕೃತಿಯ ರೀತಿಯು ಎಷ್ಟೋ ಸಣ್ಣ ವಿವರಗಳನ್ನೂ ಕೂಡ ಬಿಡದೆ ಚೆನ್ನಾಗಿ ತಿಳಿಯಿತು. ಇದರಿಂದ ನಾನು ಕಾವ್ಯ ಬರೆಯಬೇಕೆಂದಾಗ ವಿಷಯವೆಲ್ಲ ಸಿದ್ಧವಾಗಿರುತ್ತದೆ. ತಪ್ಪು ಬರೆಯಬೇಕಾದರೂ ನನಗೆ ಬರುವುದಿಲ್ಲ.''

ಪರದೇಶಗಳ ಸಾಹಿತ್ಯಗಳ ವಿಷಯದಲ್ಲಿ ಇವರ ದೃಷ್ಟಿ ಬಹಳ ಉದಾರವಾದದ್ದು. ಶಾಕುಂತಲವನ್ನು ಇವರು ಎಷ್ಟು ಪ್ರಶಂಸಿಸಿದರೆಂದು ಅನೇಕರಿಗೆ ತಿಳಿದಿದೆ. ಚೈನಾದೇಶದ ಒಂದು ಕತೆಯನ್ನು ಓದಿದ ಸಂದರ್ಭದಲ್ಲಿ ಎಕರ್‌ಮನರು ಅದು ವಿಚಿತ್ರವಾಗಿರಬೇಕಲ್ಲವೆ ಎಂದದ್ದಕ್ಕೆ ಗಯಟೆಯವರು ಹೀಗೆಂದರು. ''ಅದು ಅಷ್ಟೇನೂ ವಿಚಿತ್ರವಾಗಿ ಕಾಣುವುದಿಲ್ಲ. ಚೈನಾದೇಶದ ಜನರು ಹೆಚ್ಚು ಕಡಿಮೆ ನಮ್ಮಂತೆಯೇ ನಡೆಯುವರು, ನುಡಿಯುವರು. ಸ್ವಲ್ಪ ನೋಡುವ ಹೊತ್ತಿಗೆ ನಮಗೆ

ಅವರೂ ನಾವೂ ಒಂದೇ ರೀತಿಯ ಜನರೆಂದು ಕಾಣುವುದು. ಆದರೆ ಅವರು ಮಾಡುವುದೆಲ್ಲ ನಾವು ಮಾಡುವುದಕ್ಕಿಂತ ಇನ್ನೂ ಸ್ವಲ್ಪ ನಯವಾಗಿರುತ್ತದೆ.

"ಅವರ ಕೃತಿಗಳಲ್ಲಿ ಎಲ್ಲವೂ ಸುಶಿಕ್ಷಿತವಾಗಿ ಗೃಹಸ್ಥರಿಗೆ ಯೋಗ್ಯವಾಗಿ ಅತಿರೇಕಗಳಿಲ್ಲದೆ ಇರುತ್ತದೆ. ಇದಲ್ಲದೆ ಅವರಲ್ಲಿ ಪ್ರಕೃತಿಯು ಮಾನವನ ಜೀವನದೊಂದಿಗೆ ಬೆರೆದುಹೋಗಿರುವ ಭಾವ ಕಾಣುವುದು. ನಮ್ಮಲ್ಲಿ ಇದು ಇಲ್ಲ.....ನೀತಿಯನ್ನು ತಿಳಿಸುವ ಹತ್ತಾರು ಸಣ್ಣ ಕತೆಗಳು ಈ ಒಂದು ಕತೆಯಲ್ಲಿ ಸೇರಿಕೊಂಡಿವೆ. ಈ ರೀತಿಯ ನೀತಿಯಿಂದಲೇ ಚೈನಾರಾಜ್ಯವು ಸಾವಿರಾರುವರುಷಗಳಿಂದ ನಿಂತಿರುವುದು.ಮುಂದಕ್ಕೂ ನಿಲ್ಲುವುದು.......ಚೈನಾ ಜನರಲ್ಲಿ ಇಂತ ಕತೆಗಳು ಸಾವಿರಾರು ಇವೆ. ನಮ್ಮ ಹಿರಿಯರು ಕಾಡಿನಲ್ಲಿ ಜೀವಿಸುತ್ತಿದ್ದಾಗಲೇ ಅವರಲ್ಲಿ ಇಷ್ಟು ನಾಜೂಕು ಉಂಟಾಗಿತ್ತು.

"ನೋಡಿದಹಾಗೆಲ್ಲ ನನ್ನ ಮನಸ್ಸಿಗೆ ಕಾವ್ಯವು ಸರ್ವಸಾಮಾನ್ಯವಾಗಿ ಎಲ್ಲ ಕಾಲದಲ್ಲಿಯೂ ಎಲ್ಲೆಡೆಯಲ್ಲಿಯೂ ನೂರಾರು ಜನರಲ್ಲಿ ವ್ಯಕ್ತವಾಗುವ ಶಕ್ತಿಯೆಂದು ಕಾಣುತ್ತದೆ."

ಕಾವ್ಯದ ಕೆಲಸ ಬಹಳ ಹಿರಿಯದೆಂದು ಗಯುಟೆಯವರ ಭಾವನೆ. ಸೋಫೋಕ್ಲಿಸ್ ಕವಿಯ 'ಆನ್‌ಟಿಗಾನಿ' ಎಂಬ ನಾಟಕವನ್ನು ಕುರಿತು ಮಾತನಾಡುತ್ತ ಅದರಲ್ಲಿಯ ಧರ್ಮಜ್ಞಾನವನ್ನು ಪ್ರಶಂಸಿಸಿ ಈ ಧರ್ಮವೆಂಬ ಭಾವನೆಯು ಸೃಷ್ಟಿಯಲ್ಲಿ ಬಂದದ್ದು ಎಲ್ಲಿಂದ ಎಂದಾಗ "ಉಳಿದದ್ದೆಲ್ಲ ಎಲ್ಲಿಂದ ಬಂತೋ ಅಲ್ಲಿಂದಲೇ. ದೇವರಿಂದ. ಮಾನವನು ಧರ್ಮವನ್ನು ಸೃಷ್ಟಿಮಾಡಲಿಲ್ಲ. ಅದು ಅವನ ಹೃದಯದಲ್ಲಿ ಸಹಜವಾಗಿ ತಲೆದೋರಿತು" ಎಂದರು.

ಉತ್ತಮವಾದ ಕೃತಿಯಲ್ಲಿ ಕಾಣುವುದು ದೈವಿಕವಾದ ಶಕ್ತಿ ಎನ್ನುವುದಕ್ಕಾಗಿ ಒಂದುಸಲ ಇವರು ಹೀಗೆಂದು ಹೇಳಿದರು. "ಮತ ಮತ್ತು ನೀತಿಯಲ್ಲಿ ದೇವರು ತನ್ನ ಶಕ್ತಿಯನ್ನು ಪ್ರಕಾಶಪಡಿಸುತ್ತಿದಾನೆಂದು ಜನರು ಒಪ್ಪುವರು. ವಿಜ್ಞಾನ ಲಲಿತ ಕಲೆಗಳು ಕೇವಲ ಮಾನುಷಿಕ

ವ್ಯಾಪಾರವೆಂಬಂತೆ ಆಡುವರು....ಬರಿಯ ಮಾನುಷ ಬುದ್ಧಿ ಮಾನುಷ ಯತ್ನದಿಂದ ಮೋಜಾರ್ಟ್, ರ್‍ಯಾಫೇಲ್, ಷೇಕ್ಸ್‌ಪಿಯರ್ ಎಂಬ ಮಹನೀಯರ ಕೃತಿಗಳಿಗೆ ಸಮನಾದ ಕೃತಿಗಳನ್ನು ಮಾಡಲು ಜನರು ತೊಡಗಲಿ ತಿಳಿಯುತ್ತದೆ.....ದೇವರು (ಬೈಬಲಿನಲ್ಲಿ ಹೇಳುವಂತೆ) ಆರುದಿನ ಕೆಲಸ ಮಾಡಿ ಏಳನೆಯ ದಿನ ವಿಶ್ರಾಂತಿಗೆ ಹೋಗಿ ಕುಳಿತುಬಿಡಲಿಲ್ಲ. ಮೊದಲನೆಯ ದಿನ ಹೇಗೋ ಹಾಗೆಯೇ ಈಗಲೂ ಕೆಲಸದಲ್ಲಿದಾನೆ.''

ಗಯಟೆಯವರಿಗೆ ಆತ್ಮಪ್ರತ್ಯಯ ಬಹಳವಿತ್ತು. ಆದರೆ ಮಮತೆಯಿರಲಿಲ್ಲ, ಅಹಂಕಾರವಿರಲಿಲ್ಲ. ಆದ್ದರಿಂದ ಅವರು ಇತರರ ವಿಷಯವನ್ನು ಹೇಳುವಂತೆ ತಮ್ಮ ವಿಷಯವನ್ನು ಸಂಕೋಚವಿಲ್ಲದೆ ಧಾರಾಳವಾಗಿ ತಮ್ಮ ಮಾತಿನಲ್ಲಿ ಹೇಳುತ್ತಿದ್ದರು. ಇದು ಈ ಮೊದಲೇ ವ್ಯಕ್ತವಾಗಿರಬೇಕು. ಇವರು ತಮ್ಮ ಪದ್ಯಗಳ ವಿಷಯದಲ್ಲಿ ಆಗಾಗ ಹೇಳಿದ ಮಾತುಗಳಲ್ಲಿಯೂ ಇದು ಸ್ಪಷ್ಟವಾಗುತ್ತದೆ. ತಮ್ಮ ಒಂದು ಕಾವ್ಯವನ್ನು ಕುರಿತು ಇವರು ಒಂದುಸಲ, ''ಆ ಕಾವ್ಯವು ಆಯಾ ಕ್ಷಣದ ಭಾವನೆಯಂತೆ ಆಗಾಗ ಬರೆದದ್ದೆಂಬುದು ಅದರಲ್ಲೇ ಕಾಣುತ್ತದೆ. ಯೋಜಣೆಯೆಂದಾಗಲಿ ಸಮಾಪ್ತಿಯೆಂದಾಗಲಿ ಆಗ ಮನಸ್ಸಿನಲ್ಲೇ ಇರಲಿಲ್ಲ. ಬಾನಿಯಿಂದ ನೀರನ್ನು ಸುರಿಯುವಂತಿತ್ತು ಆ ಬರವಣಿಗೆ'' ಎಂದರು. ತಮ್ಮ ಇನ್ನೊಂದು ಕಾವ್ಯವನ್ನು ಕುರಿತು, ''ಮನಸ್ಸಿನ ಅತಿ ತೀವ್ರವಾದ ಅವಸ್ಥೆಯೊಂದನ್ನು ನೀನು ಅಲ್ಲಿ ಕಾಣುವೆ. ಆ ಅವಸ್ಥೆಯಲ್ಲಿ ನಾನು ಇದ್ದಾಗ ಅದನ್ನು ಬಿಡುವುದಕ್ಕೆ ಏನೇ ಆಗಲಿ ಸಮ್ಮತಿಸಿರಲಾರೆನು. ಅದು ತಪ್ಪಿಹೋದ ಈಗ ಮತ್ತೆ ಏನೇ ಆಗಲಿ ಅದಕ್ಕೆ ನಾನು ಹೋಗಲಾರೆನು...ಮೇರಿಯನ್‌ಬಾಡ್ ನಗರವನ್ನು ಬಿಟ್ಟ ಒಡನೆಯೇ ನನ್ನ ಅನುಭವವೆಲ್ಲವೂ ಹೊಸದಾಗಿರುವಾಗಲೇ ಅದನ್ನು ನಾನು ಬರೆದುಬಿಟ್ಟೆನು. ನಮ್ಮ ಗಾಡಿಯು ಎಂಟುಗಂಟೆಗೆ ಒಂದು ಛತ್ರದ ಬಳಿ ನಿಂತಾಗ ಅದರ ಮೊದಲನೆಯ ಭಾಗವನ್ನು ಬರೆದೆನು. ಗಾಡಿ ನಡೆಯುವಾಗ ಮನಸ್ಸಿನಲ್ಲಿ ಕಾವ್ಯವನ್ನು ರಚಿಸುವುದು, ನಿಂತಾಗ ಅದನ್ನು ಬರೆಯುವುದು. ಹೀಗೆ ಸಂಜೆಯ ವೇಳೆಗೆ ಅದಷ್ಟೂ ಕಾಗದದ ಮೇಲೆ

ಬಂದಿತ್ತು. ಈ ಕಾರಣದಿಂದ ಅದು ಒಂದು ನೇರವಾದ ರೀತಿಯಲ್ಲಿ ಭಾವನೆಯನ್ನು ತೋರಿಸುತ್ತದೆ. ಒಮ್ಮೆಗೇ ಸುರಿದಂತೆ ಕಾಣುತ್ತದೆ. ಇದರಿಂದ ಕಾವ್ಯಕ್ಕೆ ಒಟ್ಟಿನಲ್ಲಿ ಗುಣವೇ ಉಂಟಾಗಿದೆ.'' ಎಂದರೆ ಈ ಮಾತುಗಳು ಇವರ ಕವನದ ರೀತಿಯನ್ನು ವರ್ಣಿಸುತ್ತವೆ. ಸ್ಕಿಲರ್ ಕವಿಯ ಇಷ್ಟಕ್ಕಾಗಿ ತಾನು ಬರೆದ ಕೆಲವು ಪದ್ಯದ ಕಥೆಗಳನ್ನು ಕುರಿತು ಇವರು ಹೀಗೆಂದರು: ''ನಾನು ಇವನ್ನು ಬರೆಯುವುದಕ್ಕೆ ಸ್ಕಿಲರು ಕಾರಣ. ಅವನ ಹೋರನ್ ಪತ್ರಿಕೆಗೆ ಹೊಸ ಬರಹ ಬೇಕೆಂದು ಅವನು ನನ್ನನ್ನು ಪೀಡಿಸುತ್ತಿದ್ದನು. ಈ ಕಥೆಗಳ ಭಾವಗಳು ನನ್ನ ಮನಸ್ಸಿನಲ್ಲಿ ಬಹಳ ವರ್ಷಗಳಿಂದ ಇದ್ದಂಥವು. ಇವು ಮನಸ್ಸಿನೊಳಕ್ಕೆ ಆಗಾಗ ಬರುವುವು. ಬಂದು ಆಗಾಗ ಹೋಗುವುವು. ಈ ರೀತಿಯು ನೆನವಿನಲ್ಲಿ ನನ್ನ ಮನಸ್ಸು ನಲಿಯುತ್ತಿತ್ತು. ಸ್ಕಿಲರ್ ಬಂದು ಹಿಂಸೆ ಮಾಡಿದಾಗ ನಾನು ಸುಂದರವಾದ ಆ ಭಾವನೆಗಳನ್ನು ಈ ಅರ್ಥ ಸಾಲದ ಬಣ್ಣವಿಲ್ಲದ ಮಾತುಗಳಲ್ಲಿ ಕಟ್ಟಿಡುವುದಕ್ಕೆ ಮನಸ್ಸು ಮಾಡಿದೆನು. ಅವುಗಳನ್ನು ಕಾಗದದ ಮೇಲೆ ನೋಡಿದಾಗ ನನ್ನ ಮನಸ್ಸಿನಲ್ಲಿ ಅರ್ಧ ವ್ಯಸನ; ಪ್ರಿಯನಾದ ಮಿತ್ರನೊಬ್ಬನನ್ನು ಬಿಟ್ಟು ಕಳುಹಿಸುವಂತೆ ಇತ್ತು.''

ತಾನು ಸದಾ ಬೆಳೆಯುತ್ತಿದ್ದೆನೆಂದು ಇವರು ಹೇಳಿದ್ದು ಮೇಲೆ ಬಂದಿದೆ. ಈ ಕಾರಣದಿಂದ ತಾವು ಹೇಳಿದ್ದ ಮಾತು ತಮಗೇ ಮರೆತು ಹೋಗುತ್ತಿತ್ತು. ಒಂದುಸಲ ಎಕರ್‌ಮನರೊಂದಿಗೆ ಹೀಗೆ ಹೇಳಿದರು. ''ಈಗ ಕೆಲವು ದಿನದ ಹಿಂದೆ ನನ್ನ ಕೈಗೆ ಯಾವುದೋ ಒಂದು ಹರಕು ಕಾಗದ ಸಿಕ್ಕಿತು. ಅದನ್ನು ಓದಿ 'ಹುಂ ಇಲ್ಲಿ ಬರೆದಿರುವುದು ಅಷ್ಟೇನೂ ತೆಗೆದುಹಾಕುವಂತಿಲ್ಲ. ನನ್ನ ಅಭಿಪ್ರಾಯವೂ ಹೀಗೆಯೇ ಇದೆ. ಹೇಳುವ ರೀತಿಯೂ ಬಹಳ ಬೇರೆಯಾಗಿಲ್ಲ' ಎಂದುಕೊಂಡೆನು. ಆಮೇಲೆ ಕಾಗದವನ್ನು ಚೆನ್ನಾಗಿ ನೋಡಲಾಗಿ ಅದು ನನ್ನ ಪುಸ್ತಕಗಳದೊಂದು ಹರಕು ಪುಟವೆಂದು ತಿಳಿಯಿತು. ನಾನು ಯಾವಾಗಲೂ ತಿದ್ದಿಕೊಂಡು ಮೇಲೇರುವುದಕ್ಕೆ ಯತ್ನಿಸುತ್ತಿರುವುದರಿಂದ ಹಿಂದೆ ಬರೆದದ್ದನ್ನು ಮರೆತುಹೋಗುತ್ತೇನೆ. ಸ್ವಲ್ಪಕಾಲದಲ್ಲಿ ನನ್ನ ಬರಹವೇ ನನಗೆ ಬೇರೆ ಯವರದಂತೆ ಕಾಣುತ್ತದೆ.'' ಇನ್ನೊಂದು ಸಲ ಹೀಗೆಯೇ ಆಯಿತಂತೆ.

ಅದನ್ನೂ ಏಕರ್‌ಮನ್ನರಿಗೆ ತಿಳಿಸಿದರು. "ಅನೇಕವೇಳೆ ನನ್ನ ಕೃತಿಗಳು ನನಗೇ ಹೊಸವಾಗಿ ಕಾಣುತ್ತವೆ. ಇಂದು ನಾನು ಫ್ರೆಂಚಿನಲ್ಲಿ ಒಂದು ಪ್ರಬಂಧವನ್ನು ಓದುತ್ತಾ 'ಈ ಮನುಷ್ಯ ಪರವಾ ಇಲ್ಲ. ಚೆನ್ನಾಗಿಯೇ ಬರೆದಿದಾನೆ. ಇದನ್ನು ನಾನು ಹೇಳಿದ್ದರೂ ಬೇರೆ ರೀತಿಯಲ್ಲಿ ಹೇಳುತ್ತಿರಲಿಲ್ಲ' ಎಂದುಕೊಂಡೆನು. ಆಮೇಲೆ ಚೆನ್ನಾಗಿ ನೋಡುವಲ್ಲಿ ನನಗೆ ಹಾಗೆ ತೋರಿದ ವಾಕ್ಯಗಳು ನನ್ನ ಕೃತಿಯಿಂದ ಫ್ರೆಂಚ್ ಭಾಷೆಗೆ ಹಾಕಿದ್ದ ವಾಕ್ಯಗಳೆಂಬುದು ತಿಳಿಯಿತು." ತಮ್ಮ ಬೆಳವಣಿಗೆ ತಿಳಿಯಲೆಂದು ಇವರು ತಮ್ಮ ಕೃತಿಗಳ ಕೆಳಗೆ ಬರೆದ ಕಾಲವನ್ನು ಗುರುತು ಹಾಕುತ್ತಿದ್ದರು. ಏಕರ್‌ಮನರಿಗೂ ಹೀಗೆ ಮಾಡೆಂದು ಹೇಳಿದರು. "ನೀನು ಬರೆಯುವ ಒಂದೊಂದು ಕೃತಿಯ ಕೆಳಗೂ ಅದನ್ನು ಬರೆದ ಕಾಲವನ್ನು ತೋರಿಸು......ಹೀಗೆ ಮಾಡಿದರೆ ನಿನ್ನ ಕೃತಿಗಳು ನಿನ್ನ ಬೆಳವಣಿಗೆಯನ್ನು ತೋರಿಸುವ ದಿನಚರಿಯಾಗುವುವು. ನಾನು ಬಹಳ ವರ್ಷಗಳಿಂದ ಹೀಗೆ ಮಾಡಿ ಅದರಲ್ಲಿ ಎಷ್ಟು ಪ್ರಯೋಜನವಿದೆಯೆಂದು ಬಲ್ಲೆನು."

೧೨

ಗಯಟೆಯವರ ಮಾತು ಇದುವರೆಗೆ ಹೇಳಿರುವುದರಿಂದಲೇ ಅವರ ವಿಮರ್ಶೆಯು ಎಷ್ಟು ಉತ್ತಮ ರೀತಿಯದು ಎಂದು ವ್ಯಕ್ತವಾಗಿರಬೇಕು. ಕಾವ್ಯವೆನ್ನುವುದರ ವಿಷಯದಲ್ಲಿ ಇವರ ಭಾವನೆ ಬಹಳ ಹಿರಿಯದು. ಇವರಿಗೆ ಇತರ ಕಲೆಗಳಲ್ಲಿಯೂ ತಿಳಿವಳಿಕೆಯಿತ್ತು. ಕಲೆಯಲ್ಲಿ ಕೌಶಲ ಬರಬೇಕಾದರೆ ವ್ಯವಸಾಯ ಆವಶ್ಯಕವೆಂದು ಇವರ ಅಭಿಪ್ರಾಯ. ಕಲೆ ಬೆಳೆಯಬೇಕಾದರೆ ಶಾಂತಿ ಇರಬೇಕು; ಒಬ್ಬರಿಂದೊಬ್ಬರು ಕಲಿಯಬೇಕು; ಜನಾಂಗವು ಎಚ್ಚರವಾಗಿರಬೇಕು; ಜನವೇ ಮುಂದುವರಿಯುವುದು ಹೇಗೆ ಎಂದು ಪ್ರತಿಯೊಬ್ಬ ಗ್ರಂಥಕಾರನೂ ತನ್ನನ್ನು ಮರೆತು ಜನಕ್ಕಾಗಿ ಕಲೆಗಾಗಿ ಕೆಲಸಮಾಡಬೇಕು; ಕಾವ್ಯಶಕ್ತಿ ಒಬ್ಬ ವ್ಯಕ್ತಿಗಾಗಲಿ ಒಂದು ನಾಡು ಒಂದು ಜನಕ್ಕಾಗಲಿ ಸೇರಿದ್ದಲ್ಲ; ಅದನ್ನು ಭಗವಂತನು ಎಲ್ಲೆಡೆಯಲ್ಲಿಯೂ ಹರಡಿದಾನೆ. ಇದೆಲ್ಲ ಇವರ ಮಾತಿನಲ್ಲಿ ಕಾಣುವ ಅಭಿಪ್ರಾಯ. ಶೈಲಿಯ ವಿಷಯದಲ್ಲಿ, ಕಾವ್ಯದಲ್ಲಿ ಮತವನ್ನು

ತರುವ ವಿಷಯದಲ್ಲಿ, ಇವರು ಸೂಚಿಸಿರುವ ಅಭಿಪ್ರಾಯಗಳು ತತ್ತ್ವಸಿದ್ಧವಾದುವು, ಸರ್ವಸಮ್ಮತವಾದುವು. ಇದರಿಂದೆಲ್ಲ ಇವರ ವಿಮರ್ಶನಾ ಶಕ್ತಿಯು ಸಹಜವಾಗಿ ತೀಪ್ರವಾಗಿದ್ದದ್ದು ಅಭ್ಯಾಸದಿಂದ ಸಮವಾಗಿ ವ್ಯವಹಾರದಿಂದ ಉದಾರವಾಗಿ ಕೊನೆಗೆ ಬಹಳ ಪ್ರಸನ್ನವಾಗಿತ್ತೆಂದು ಸ್ಪಷ್ಟವಾಗುತ್ತದೆ.

ಈ ವಿಚಾರದಲ್ಲಿ ನಾವು ಇನ್ನೊಂದು ವಿಷಯವನ್ನು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಇಲ್ಲಿ ಹೇಳಿರುವ ಮುಖ್ಯ ಭಾವಗಳೆಲ್ಲ ಪಾಶ್ಚಾತ್ಯ ವಿಮರ್ಶೆಯಲ್ಲಿ ಈಗ ವಾಡಿಕೆಯಾಗಿವೆ. ಇವುಗಳಲ್ಲಿ ಬಹು ಭಾಗವನ್ನು ಎಲ್ಲರೂ ಸ್ವತಃಸಿದ್ಧ ತತ್ತ್ವಗಳೆಂದು ಒಪ್ಪಿ ನಡೆಯುತ್ತಾರೆ. ಆದರೆ ಗಯಟೆಯವರು ಈ ತತ್ತ್ವಗಳನ್ನು ಹೀಗೆ ಕಲಿತವರಲ್ಲ. ಅವರು ಇವುಗಳ ವಿಚಾರವನ್ನು ಆರಂಭಿಸಿದವರಲ್ಲಿ ಒಬ್ಬರು. ನಾವು ಸ್ವತಂತ್ರ ಮಾರ್ಗ ಸಿದ್ಧಾಂತ ಮಾರ್ಗವೆಂದು ಕರೆಯಬಹುದೆಂದು ಸೂಚಿಸಿರುವ ಮಾರ್ಗಗಳಿಗೆ ಪಾಶ್ಚಾತ್ಯರಲ್ಲಿ ರೊಮ್ಯಾಂಟಿಕ್, ಕ್ಲಾಸಿಕ್ ಎಂದು ಹೇಳುತ್ತಾರೆ. ಈ ಹೆಸರುಗಳನ್ನು ಮೊದಲು ಉಪಯೋಗಿಸಿದವರು ಗಯಟೆಯವರು.

ಗಯಟೆಯವರ ಬುದ್ಧಿಯು ಪ್ರಪಂಚದ ಇತರ ವಿಷಯಗಳ ಮೇಲೆ ಪ್ರಸರಿಸಿದಾಗ ಉಂಟಾದ ಭಾವಗಳೂ ಅವರ ಮಾತುಗಳಲ್ಲಿ ವ್ಯಕ್ತವಾಗಿವೆ. ಅವು ಎಷ್ಟು ಉದಾತ್ತವಾದುವೆಂದು ತಿಳಿಯಬೇಕೆಂದರೆ ಆ ಮಾತುಗಳನ್ನೇ ಓದಬೇಕು. ಉದಾಹರಣೆಗೆ ಒಂದನ್ನು ಹೇಳಬಹುದು. ಮಾತಿಗೆ ಮುಂಚೆ ದೇವರ ವಿಷಯ ತೆಗೆಯುವವರನ್ನು ಕುರಿತು ಇವರು, "ಭಾವನೆಗೇ ಸಿಲುಕದ ದುರ್ಜ್ಞೇಯವಾದ ಆ ಪರವಸ್ತುವನ್ನು ಜನರು ತಮ್ಮ ಸಮಾನ ವಸ್ತುವೆಂಬಂತೆ ಮಾತನಾಡುತ್ತಾರೆ. ಇಂಥವರಿಗೆ ಅದರಲ್ಲೂ ಆ ಹೆಸರನ್ನು ದಿನ ದಿನವೂ ಬಾಯಲ್ಲಿ ಹೇಳುವ ಪುರೋಹಿತ ವರ್ಗಕ್ಕೆ ಇದು ಬರಿಯದೊಂದು ಮಾತು ಮಾತ್ರ ಆಗುತ್ತದೆ. ಅದರಲ್ಲೂ ಬಂಜೆಯಾದ ಒಂದು ಮಾತು. ಎಂದರೆ ಅದಕ್ಕೆ ಸಂಬಂಧಿಸಿ ಮನಸ್ಸಿನಲ್ಲಿ ಭಾವನೆಯೊಂದೂ ಇರುವುದಿಲ್ಲ. ದೇವರು ಎಷ್ಟು ದೊಡ್ಡವನೆಂದು ತಿಳಿದಿದ್ದರೆ ಇವರು ಮೂಕರಾಗಿರುತ್ತಿದ್ದರು. ಭಕ್ತ್ಯುತ್ಕರ್ಷದಿಂದ ಅವನ ಹೆಸರನ್ನು ಹೇಳುವುದಕ್ಕೆ ಸಮ್ಮತಿಸದೆ ಇರುತ್ತಿದ್ದರು" ಎಂದರು. ಈ

ಮಾತಿನಲ್ಲಿ ಕಾಣುವ ವಿವೇಕವೂ ಜ್ಞಾನವೂ ಭಕ್ತಿಯೂ ಎಷ್ಟು ದೊಡ್ಡವೆಂದು ಹೇಳಬೇಕಾಗಿಲ್ಲ. ಇವರು ದೇಹವನ್ನು ಬಿಡುವ ಮೊದಲು ಸನ್ನಿಯಲ್ಲಿದ್ದರೂ 'more light' ಎಂದು ಹೇಳಿ ಕಣ್ಣುಮುಚ್ಚಿಕೊಂಡರಂತೆ. ಈ ಮಾತುಗಳನ್ನು ಜ್ಞಾನವಿಸ್ತಾರವಾಗಬೇಕು ಎಂಬ ಅರ್ಥದಲ್ಲಿ ಕವಿಯು ಹೇಳಿದರೆಂದು ಕೆಲವರು ಹೇಳುತ್ತಾರೆ. ಕೊಟಡಿಗೆ ಇನ್ನು ಸ್ವಲ್ಪ ಬೆಳಕು ಬೇಕು ಎಂದು ಕವಿ ಕೇಳಿದರೆಂದು ಇನ್ನು ಕೆಲವರು ಅಭಿಪ್ರಾಯಪಡುತ್ತಾರೆ. ಯಾವ ಅರ್ಥದಿಂದ ಹೇಳಿದ್ದರೂ ಈ ಮಾತುಗಳು ಸಹಾ ಸತ್ಯದ ಅನ್ವೇಷಣೆಯಲ್ಲಿ ಬಾಳಿದ ಈ ಮಹನೀಯರ ಜೀವನದ ಅಂತ್ಯವಾಕ್ಯವಾಗಿರಲು ತಕ್ಕುವಾಗಿವೆ. ಈ ಮಹನೀಯರು ಜೀವಂತರಾಗಿದ್ದಾಗಲೇ ಯೂರೋಪ್ ಖಂಡ ಖಂಡವೇ ಇವರಿಗೆ ಮರ್ಯಾದೆಯನ್ನು ತೋರಿತು. ಪಾಶ್ಚಾತ್ಯ ಸಾಹಿತ್ಯ ಸಾಮ್ರಾಜ್ಯದ ಚಕ್ರವರ್ತಿಯೆಂದು ಇವರನ್ನು ಇಂಗ್ಲೆಂಡ್, ಫ್ರಾನ್ಸ್, ರಷಿಯಾ, ಇಟಲಿ—ಈ ಎಲ್ಲ ದೇಶದ ಕವಿಗಳೂ, ಗ್ರಂಥಕರ್ತರೂ ಒಪ್ಪಿಕೊಂಡರು. ಈ ಮಹಾಪುರುಷನ ಹೆಸರು ಭರತವರ್ಷಕ್ಕೆ ಕಾಳಿದಾಸನ ಹೆಸರಂತೆ, ಇಂಗ್ಲೆಂಡಿಗೆ ಷೇಕ್ಸ್ಪಿಯರ ಹೆಸರಂತೆ ಈಗಲೂ ಜರ್ಮನಿಗೆ ಭೂಷಣವಾಗಿದೆ.

ಗಯಟೆಯವರ ಗ್ರಂಥಗಳಲ್ಲಿ ಅತ್ಯುತ್ತಮವಾದುವು ಕನ್ನಡದಲ್ಲಿ ನಮ್ಮ ಜನರಿಗೆ ದೊರಕುವಂತೆ ಮಾಡುವುದು ನಮ್ಮ ಗ್ರಂಥಕಾರರು ಕೈಗೊಳ್ಳಬೇಕಾದ ಕೆಲಸವಾಗಿದೆ.

---

# ಠಾಕೂರಕವಿವರ್ಯರ ಗೀತಾಂಜಲಿ

೧

ಒಂದಾನೊಂದು ಕಾಲದಲ್ಲಿ ನಾಗರಿಕತೆಯಲ್ಲಿಯೂ ಅದರ ಅಂಶಗಳಾದ ಕುಶಲ ಕಲೆಗಳಲ್ಲಿಯೂ ಪ್ರಪಂಚದ ಇತರ ಎಲ್ಲ ಭಾಗಕ್ಕಿಂತಲೂ ಹೆಚ್ಚಾದ ಉನ್ನತಿಯನ್ನೈದಿದ್ದ ಭಾರತವರ್ಷವು ಈಚೆಗೆ ನೂರಾರು ವರ್ಷಗಳಿಂದ ನಾಗರಿಕತೆಯಲ್ಲಿ ಬೀಳಾಗದಿದ್ದರೂ ಕುಶಲ ಕಲೆಗಳಲ್ಲಿ ಆ ಉನ್ನತಿಯನ್ನು ಬಿಟ್ಟು ಕೇವಲ ಅಧೋಗತಿಯನ್ನು ಹೊಂದಿದೆ. ಕಲೆಗಳಲ್ಲೊಂದಾದ ಸಾಹಿತ್ಯದಲ್ಲೂ ಈ ದೇಶಕ್ಕೆ ಈ ಗತಿ ಬಂದಿರುವುದೆನ್ನುವುದು ಸಾಮಾನ್ಯವಾಗಿ ಎಲ್ಲರಿಗೂ ತಿಳಿದ ವಿಷಯವೇ. ಯಾರ ಕವಿತೆಯ ಸೊಬಗೂ ಮಾಧುರ್ಯವೂ ಲಾಲಿತ್ಯವೂ ಸರಸ್ವತಿಯ ಅವತಾರಕ್ಕೆಮಾತ್ರ ಸಾಧ್ಯವಾದ ಸೊಬಗು ಮಾಧುರ್ಯ ಲಾಲಿತ್ಯವೆಂದು ಎಲ್ಲ ಕಾಲದ ಜನರಿಗೆ ತೋರಿದೆಯೋ ಅಂಥ ಕಾಳಿದಾಸನು ತಿರುಗಿ ಬರಲಿಲ್ಲವೆಂಬ ಮಾತು ಬೇಡ. ಯಾವ ಸೀಮೆಗೇ ಆಗಲಿ ಕಾಳಿದಾಸರಿಬ್ಬರನ್ನು ತನ್ನವರೆಂದು ಹೇಳುವ ಪುಣ್ಯವು ಲಭಿಸದು. ಇಲ್ಲಿ ಕಾಳಿದಾಸನೊಬ್ಬನೇ; ಪಾಶ್ಚಾತ್ಯರಿಗೆ ಷೇಕ್ಸ್ಪಿಯರೊಬ್ಬನೇ. ಹೀಗೆಯೇ ಅವರವರು ಆಕ್ರಮಿಸಿರುವ ಉನ್ನತ ಶಿಖರಗಳಲ್ಲಿ, ಗ್ರೀಕರ ಹೋಮರ್, ರೋಮನರ ವರ್ಜಿಲ್, ಇಟಲಿಯವರ ಡಾಂಟೇ, ಜರ್ಮನರವರ ಗಯಟೇ—ಈ ಹೆಸರುಗಳಿಗೆ ಸರಿಯಾಗಿ ತೂಗುವ ಬೇರೆ ಹೆಸರು ಆಯಾ ದೇಶದಲ್ಲಿ ಇನ್ನು ಯಾವುದೂ ಇಲ್ಲ. ಆದರೆ ಕಾಳಿದಾಸನಂತೆ ಶ್ರೇಷ್ಠರಾದ ಕವಿಗಳೇ ಅಲ್ಲ; ಅವನನ್ನು ತನ್ನವನೆಂದು ಹೇಳುವ ದೇಶವು ಮರ್ಯಾದೆಯಿಂದ ಗಣಿಸಬಹುದಾದ ಕವಿಗಳೇ ನಮ್ಮ ಸೀಮೆಯಲ್ಲಿ ಈಚೆಗೆ ಇಲ್ಲದೆ ಹೋದರು. ಜನ ಸಮುದಾಯಗಳ ಬುದ್ಧಿಶಕ್ತಿಯ ಉಬ್ಬು ತಗ್ಗುಗಳನ್ನು ತಿಳಿದು ವಿವರಿಸಬಲ್ಲ ಚರಿತ್ರಕಾರರು ಬಹುಶಃ ಇದಕ್ಕೂ ತಕ್ಕ ಕಾರಣಗಳನ್ನು ಹೇಳಬಲ್ಲರು. ಕಾರಣಗಳು ಯಾವುವೇ ಆಗಲಿ, ಸಾಹಿತ್ಯಕ್ಕೆ ಭಾರತವರ್ಷದಲ್ಲಿ ಹೀಗೆ ಉಂಟಾಗಿರುವ ದುರ್ಗತಿಗಾಗಿ ನಾವು ಎಷ್ಟು ನೊಂದರೂ ತೀರದು. ಭಾರತೀಯರನ್ನು ಎಲ್ಲ ಕಡೆಯಲ್ಲಿಯೂ ವ್ಯಾಪಿಸಿರುವ ದುರದೃಷ್ಟವು

ಸಾಹಿತ್ಯದಲ್ಲಿಯೂ ವ್ಯಾಪಿಸಿ ಮಿಕ್ಕ ಜನಾಂಗಗಳಲ್ಲಿ ಅವರು ತಲೆಯನ್ನೆತ್ತದಂತೆ ಮಾಡಿದ್ದಿತು. ಹೀಗೆ ತಗ್ಗಿಸಿರುವ ತಲೆಯನ್ನು ಎತ್ತುವಂತೆ ಮಾಡುವ ಪುಣ್ಯವು ಯಾರದೋ ಅವರು ಧನ್ಯರು. ಈ ಕಾರ್ಯವನ್ನು ಕೈಕೊಂಡು ಭಾರತಮಾತೆಯ ಕೀರ್ತಿಯನ್ನು ತಮ್ಮ ಗ್ರಂಥಗಳಿಂದ ವೃದ್ಧಿಗೊಳಿಸಿ ದೇಶಸೇವೆಯ ಕಾರ್ಯದಲ್ಲಿ ಜಯವನ್ನು ಪಡೆದಿರುವ ನವೀನ ಭಾರತೀಯರಲ್ಲಿ ಪ್ರಮುಖರಾದವರು ಶ್ರೀಯುತ ರವೀಂದ್ರನಾಥ ಠಾಕೂರರವರು. ಬಹಳ ಚಿಕ್ಕ ವಯಸ್ಸಿನಿಂದ ಮಾತೃಭಾಷೆಯಾದ ವಂಗ ಭಾಷೆಯಲ್ಲಿ ಗದ್ಯ, ಪದ್ಯ, ಚಂಪು, ನಾಟಕ ಮೊದಲಾದ ಕಾವ್ಯಗಳನ್ನು ಬರೆದು ವಂಗದೇಶದಲ್ಲಿ ಪ್ರಸಿದ್ಧಿಯನ್ನು ಹೊಂದಿ ಇವರು ಕ್ರಿಸ್ತಶಕ ೧೯೧೩ನೆಯ ಇಸವಿಯಲ್ಲಿ ತಮ್ಮ ಬಂಗಾಳೀ ಕೃತಿ ಕೆಲವುದರ ಭಾಷಾಂತರವನ್ನು ಇಂಗ್ಲೀಷಿನಲ್ಲಿ ಪ್ರಕಟಿಸಿ, ಪ್ರತಿ ವರ್ಷವೂ ಪ್ರಪಂಚದಲ್ಲೆಲ್ಲ ಸಾಹಿತ್ಯದಲ್ಲಿ ಪ್ರಮುಖರಾದ ಒಬ್ಬೊಬ್ಬರಿಗೆ ದೊರೆಯುವ 'ನೋಬಲ್ ಪ್ರೈಸ್' ಎಂಬ ಒಂದು ಬಹುಮತಿಯ ಶುಲ್ಕವನ್ನು ಸಂಪಾದಿಸಿದರು. ಪ್ರಪಂಚದಲ್ಲಿ ಏನು ನಡೆದರೂ ಸ್ವಾಸ್ಥ್ಯವನ್ನು ಬಿಡದೆ ದಿಮ್ಮನೆ ಇರುವುದನ್ನು ಅಭ್ಯಾಸಮಾಡಿರುವ ನಮಗೆ ರವೀಂದ್ರನಾಥ ಠಾಕೂರರವರ 'ಗೀತಾಂಜಲಿ'ಯು ಪ್ರಕಟವಾದಾಗ, ಪಾಶ್ಚಾತ್ಯರಲ್ಲಿ ಹುಟ್ಟಿದ ಉತ್ಸಾಹವೂ ಆನಂದವೂ ಅತಿಯೆಂದು ತೋರುವುದು. ಆಂಗ್ಲೇಯರಲ್ಲಿ ಅನೇಕರು ಠಾಕೂರರನ್ನು ಗುರುಗಳಂತೆ ಸ್ವೀಕರಿಸಿದರು ; ಮತ್ತೆ ಕೆಲವರು ಬಾಯಾರೆ ಸ್ತೋತ್ರಮಾಡಿ ತಮ್ಮ ಸಂತೋಷವನ್ನು ತೋರಿಸಿದರು ; ಇನ್ನು ಕೆಲವರು ಅವರ ಗ್ರಂಥವನ್ನು ಕುರಿತು ಉಪನ್ಯಾಸಗಳನ್ನು ಬರೆದು ಅವರ ಶ್ರೇಷ್ಠತೆಯನ್ನು ಜನರಿಗೆ ತಿಳಿಯುವಂತೆ ಮಾಡಿದರು. ಈ ಯಾವುದಕ್ಕೂ ಅವಕಾಶವಿಲ್ಲದ ಸಾಮಾನ್ಯ ಜನವು ಗೀತಾಂಜಲಿಯ ಪ್ರತಿಗಳನ್ನು ಸಾವಿರ ಸಾವಿರದಲ್ಲಿ ಕೊಂಡಿತು. ಎಲ್ಲಿ ನೋಡಿದರೂ ಗೀತಾಂಜಲಿ, ಗೀತಾಂಜಲಿಯ ಮಾತು ; ಅದನ್ನು ಬರೆದವರ ಮಾತು ; ಅವರ ಭಾವಚಿತ್ರವನ್ನು ನೋಡುವುದು. ಈ ರೀತಿಯ ಉತ್ಸಾಹ ಆನಂದ ಕೋಲಾಹಲಗಳಿಂದ ಪಾಶ್ಚಾತ್ಯರು ಠಾಕೂರರವರ ಕವಿತೆಯನ್ನು ಸ್ವೀಕರಿಸಿದರು. ಯೇಟ್ಸ್ ಎಂಬ ಕವಿಯು ಗೀತಾಂಜಲಿ

ಗಾಗಿ ತಾನು ಬರೆದ ಉಪೋದ್ಘಾತದಲ್ಲಿ, "ಈ ಪುಸ್ತಕವನ್ನು ನಾನು ದಿನವೆಲ್ಲ ಹತ್ತಿರವೇ ಇಟ್ಟುಕೊಂಡು ಹೋದ ಕಡೆಯಲ್ಲೆಲ್ಲ ಓದುತ್ತಿದ್ದೇನೆ: ರೈಲುಗಾಡಿಯಲ್ಲಿ, ಟ್ರಾಂ ಗಾಡಿಯಲ್ಲಿ, ಹೊಟೇಲಿನಲ್ಲಿ. ಹೀಗೆ ಓದುತ್ತ ಭಾವಪರವಶನಾಗಿ ನನ್ನ ಅವಸ್ಥೆಯನ್ನು ಯಾರಾದರೂ ನೋಡಿಯಾರೆಂದು ಪುಸ್ತಕವನ್ನು ಅನೇಕ ವೇಳೆ ಮುಚ್ಚಿದ್ದೇನೆ. ಈ ಕೀರ್ತನೆಗಳಲ್ಲಿ ವ್ಯಕ್ತವಾಗುವ ವಿಷಯಗಳು ನಾನು ನನ್ನ ಜೀವಮಾನವೆಲ್ಲ ಭಾವಿಸುತ್ತಿದ್ದಿರುವ ಪ್ರಪಂಚವನ್ನು ವರ್ಣಿಸುತ್ತವೆ. ಈ ಪದ್ಯಗಳನ್ನು ಓದುವವರಿಗೆ ಠಾಕೂರರವರ ಕಾವ್ಯವು ಎಷ್ಟು ಭಾವ ಪರಿಪೂರಿತವಾದುದು, ಎಷ್ಟು ಸ್ವಭಾವ ಜನಿತವಾದುದು, ಎಷ್ಟು ಧೀರರಾಗಾವಿಷ್ಟವಾದುದು, ಎಷ್ಟು ಕೌತುಕವನ್ನುಂಟುಮಾಡತಕ್ಕದು ಎಂದು ಕ್ಷಣ ಕ್ಷಣವೂ ಮತ್ತೆ ಮತ್ತೆ ತೋರುವುದು" ಎಂದು ಮೊದಲಾಗಿ ಬಹಳ ಉತ್ಸಾಹದಿಂದ ವರ್ಣನೆ ಮಾಡಿದ್ದಾರೆ. ಗೀತಾಂಜಲಿಯಿಂದ ರವೀಂದ್ರನಾಥ ಠಾಕೂರರ ಹೆಸರು ಪ್ರಸಿದ್ಧಿಯಾದುದಲ್ಲದೆ ಜನಾಂಗಗಳಲ್ಲಿ ಭಾರತಮಾತೆಗೆ ಒಂದು ಹೊಸ ಕೀರ್ತಿಯುಂಟಾಯಿತು.

ನಮಗೆ ಮಾತ್ರ ಇದೆಲ್ಲವೂ ಬರಿಯ ಕತೆ. ಠಾಕೂರರವರು ಹತ್ತು ವರ್ಷದ ಹಿಂದೆ ಗೀತಾಂಜಲಿಯನ್ನು ಇಂಗ್ಲೀಷಿನಲ್ಲಿ ಅಚ್ಚುಹಾಕಿಸಿ ಈಚೆಗೆ ಹತ್ತಾರು ಪುಸ್ತಕಗಳನ್ನು ಇಂಗ್ಲೀಷಿನಲ್ಲಿ ಪ್ರಕಟಿಸಿರುತ್ತಾರೆ. ಇಂಗ್ಲೀಷನ್ನು ಬಲ್ಲ ಪಾಶ್ಚಾತ್ಯ ಪ್ರಪಂಚವು ಈ ಗ್ರಂಥಗಳನ್ನು ಓದಿ ಸಂತೋಷಪಟ್ಟಿದೆ. ನಾವಾದರೋ ಗೌಳಿಗನ ಮನೆಯ ಮಕ್ಕಳು ಹಾಲಿನ ರುಚಿಯನ್ನು ಕಾಣದಂತೆ ಠಾಕೂರರವರ ಈ ಗ್ರಂಥಗಳ ರುಚಿಯನ್ನು ಅರಿಯಲಾರದೆ ಇದ್ದೇವೆ. ವಂಗ ಭಾಷೆಯನ್ನು ಅನೇಕರು ಕಲಿತು ಠಾಕೂರರ ಕಾವ್ಯಗಳನ್ನು ಆ ಭಾಷೆಯಲ್ಲಿ ನೋಡಬಹುದಾಗುವವರೆಗೂ, ಅಥವಾ ಕನ್ನಡಿಗರು ಯಾರಾದರೂ ಬಂಗಾಳೀ ಭಾಷೆಯನ್ನು ಕಲಿತು ಆ ಗೀತಿಕೆಗಳನ್ನು ಕನ್ನಡದಲ್ಲಿ ಬರೆಯುವವರೆಗೂ, ಕನ್ನಡ ನಾಡಿನವರು ಠಾಕೂರರ ಈ ಕಾವ್ಯಗಳ ರುಚಿಯನ್ನು ತಿಳಿಯಲಾಗುವ ದಿಲ್ಲ. ಆದರೆ ಪ್ರಪಂಚದಲ್ಲೆಲ್ಲ ಪ್ರಸಿದ್ಧಿಯನ್ನು ಪಡೆದು ದೇಶಕ್ಕೆ ಕೀರ್ತಿಯನ್ನು ತಂದಿರುವ ಇವರ ಗ್ರಂಥಗಳ ಮಾದರಿ ಯಾವುದೆಂಬುದನ್ನಾದರೂ

ನಮ್ಮ ಜನರಿಗೆ ಮೊದಲು ಸ್ವಲ್ಪಮಟ್ಟಿಗೆ ತಿಳಿಸುವ ಉದ್ದೇಶದಿಂದ ಇವರಿಗೆ 'ನೋಬಲ್ ಪ್ರೈಸ'ನ್ನು ತಂದ 'ಗೀತಾಂಜಲಿ'ಯನ್ನು ಕುರಿತು ಕೆಲವು ಮಾತನ್ನು ಹೇಳಲೆಂದು ಈ ಉಪನ್ಯಾಸವನ್ನು ಬರೆದಿದೆ. ಠಾಕೂರರವರು ಬಹಳ ವರ್ಷಗಳ ಕಾಲ ಗ್ರಂಥವನ್ನು ಬರೆದಮೇಲೆ ಜೀವನದ ಬಹುವಿಧದ ಪರಿಶ್ರಮದ ಫಲವಾಗಿ ಈ ಗೀತಾಂಜಲಿಯ ಪದ್ಯಗಳನ್ನು ಬರೆದರು. ಇವೆಲ್ಲ ಬಹಳಮಟ್ಟಿಗೆ ದೇವರ ಭಕ್ತಿ, ಪರವಸ್ತುವಿನ ಅರಿವು, ಆತ್ಮಜ್ಞಾನ ಇವುಗಳನ್ನು ಕುರಿತವು. ಇವುಗಳ ಭಾವಗಳನ್ನು ತೋರಿಸುವಂತೆ ಪದ್ಯಗಳಿಂದ ಭಾಗಗಳನ್ನು ಭಾಷಾಂತರ ಮಾಡಿ ಒಂದೆರಡು ಮಾತುಗಳಿಂದ ಭಾವವು ವಿಶದವಾಗುವಂತೆ ಸೂಕ್ಷ್ಮವಾಗಿ ಸೂಚನೆಗಳನ್ನು ಕೊಟ್ಟಿದೆ.

೨

ಠಾಕೂರ ಕವಿವರ್ಯರು, ಕವಿಯಾದವನು ಪರಮಾತ್ಮನು ತನ್ನ ಜೀವಕಳೆಯಿಂದ ಪುನಃಪುನಃ ತುಂಬುವ ಒಂದು ಪಾತ್ರೆ, ಅಥವಾ ತನ್ನ ಸದಾ ನೂತನವಾದ ಮಧುರ ಗಾನದಿಂದ ತುಂಬುವ ಕೊಳಲು ಎಂದು ಭಾವಿಸುತ್ತಾರೆ. (ಕವಿಯ ಗಾನವು ಪರಮಾತ್ಮನ ಆಜ್ಞೆಯಿಂದ ಬರತಕ್ಕದ್ದು. ಅದರ ಮೂಲಕ ಆತನು ಪರಮಾತ್ಮನ ಅತಿ ಮಧುರವಾದ ಸೃಷ್ಟಿಯ ಗಾನಕ್ಕೆ ಒಂದು ಸ್ವರವನ್ನು ಸೇರಿಸುತ್ತಾನೆ.) ಪರಮಾತ್ಮನ ಗಾನಕ್ಕೆ ತಕ್ಕ ವಾದ್ಯವಾಗುವುದಕ್ಕಾಗಿ ಕವಿಯು ತನ್ನ ಜೀವನವನ್ನು ಸರಿಯಾಗಿಟ್ಟುಕೊಳ್ಳಬೇಕು. ಈ ಮೂಲಕ ಅವನಲ್ಲಿ ಗಾನವುಂಟಾಗಿ ಅವನು ದೇವದೇವನ ಪಾದಾರವಿಂದವನ್ನು ಮುಟ್ಟುವನು. ಗಾನದ ಉತ್ಸಾಹದಲ್ಲಿ ದೇವರು ಒಡೆಯನೇ ಅಲ್ಲದೆ ಜೊತೆಗಾರನೂ ಆಗುವನು. ಠಾಕೂರರವರು ಈ ವಿಷಯಗಳನ್ನು ಈ ಪದ್ಯಗಳಲ್ಲಿ ಹೇಳಿದ್ದಾರೆ:—

> "ನೀನು ನನ್ನನ್ನು ಅಮರನಾಗಿ ಮಾಡಿದ್ದೀಯೆ ; ಇದು ನಿನ್ನ ಇಷ್ಟ. ಈ ಲಘುವಾದ ಪಾತ್ರವನ್ನು ಮತ್ತೆ ಮತ್ತೆ ಬರಿದುದನ್ನಾಗಿ ಮಾಡಿ ಮತ್ತೆ ಮತ್ತೆ ಜೀವಕಳೆಯಿಂದ ತುಂಬುತ್ತಿದ್ದೀಯೆ. ಈ ಸಣ್ಣ ಬಿದಿರು ಕೊಳವಿಯನ್ನು ಹಿಡಿದುಕೊಂಡು ಗುಡ್ಡ ಕಾಡುಗಳಲ್ಲೆಲ್ಲ ತಿರುಗಾಡಿ ಅದರಲ್ಲಿ ನಿನ್ನ ಸರ್ವದಾ ನೂತನವಾದ ಮಧುರ ಗಾನವನ್ನು ನುಡಿದಿದ್ದೀಯೆ.

"ನಿನ್ನ ಕೈಯ ಅಮೃತ ಸ್ಪರ್ಶದ ಬೆಸೆಯಿಂದ ಸಣ್ಣದಾದ ನನ್ನ ಹೃದಯವು ಸಂತೋಷದಿಂದ ಮೇರೆಯನ್ನು ಮೀರಿ ವರ್ಣಿಸಲಾಗದ ನುಡಿಗೆ ಸಾಧನವಾಗುತ್ತದೆ.

"ನಿನ್ನ ಅಪರಿಮಿತವಾದ ಸಂಪತ್ತೆಲ್ಲ ನನ್ನ ಈ ಸಣ್ಣ ಕೈಗಳಲ್ಲಿ ಬರುತ್ತಿದೆ. ಯುಗಯುಗಗಳು ಕಳೆಯುತ್ತಿವೆ; ಯುಗಯುಗದಲ್ಲೂ ನೀನು ಸುರಿಯುತ್ತಿದ್ದೀಯೆ ; ಇನ್ನೂ ಈ ಕೈಗಳಲ್ಲಿ ಸ್ಥಳವಿದೆ."

* * * * * *

"ನೀನು ಗಾನ ಮಾಡೆಂದು ಅಪ್ಪಣೆ ಮಾಡಿದಾಗ ನನ್ನ ಹೃದಯವು ಉತ್ಸಾಹದಿಂದ ಬಿರಿಯುವಂತೆ ತೋರುತ್ತಿದೆ. ನಾನು ನಿನ್ನ ಮುಖವನ್ನು ನೋಡುತ್ತೇನೆ. ನನ್ನ ಕಣ್ಣು ಆನಂದಾಶ್ರುವಿಂದ ತುಂಬುತ್ತದೆ.

"ನನ್ನ ಜೀವನದಲ್ಲಿ ಕಠಿನವಾದುದು ಕರ್ಕಶವಾದುದು ಎಲ್ಲವೂ ಕರಗಿ ಒಂದು ಮಧುರ ಶ್ರುತಿಯಾಗಿ ಪರಿಣಮಿಸುತ್ತದೆ. ನನ್ನ ಪೂಜೆಯು ಸಮುದ್ರವನ್ನು ದಾಟುವುದಕ್ಕೆಂದು ಸಂತೋಷದಿಂದ ಗರಿಯನ್ನು ಹರಡುವ ಪಕ್ಷಿಯೊಂದರಂತೆ ವಿಕಾಸವಾಗುತ್ತದೆ.

"ನನ್ನ ಗಾನದ ವ್ಯಾಪ್ತಿಯ ಅಂಚಿನಿಂದ ನಾನು ಅಗಮ್ಯವೇ ಆದ ನಿನ್ನ ಪಾದಾರವಿಂದವನ್ನು ಮುಟ್ಟುತ್ತೇನೆ.

"ಗಾನದ ಉತ್ಸಾಹದಿಂದ ಪರವಶನಾಗಿ ನನ್ನ ಒಡೆಯನಾದ ನಿನ್ನನ್ನು ಗೆಳೆಯನಾಗಿ ಭಾವಿಸುತ್ತೇನೆ."

* * * * * *

"ಜೀವನದ ಜೀವನವೇ ! ನಿನ್ನ ಜೀವಕಳೆಯು ನನ್ನ ಅಂಗಾಂಗದಲ್ಲಿ ವ್ಯಾಪಿಸಿರುವುದನ್ನು ತಿಳಿದು ನಾನು ಈ ದೇಹವನ್ನು ಶುದ್ಧವಾಗಿ ಇರಿಸಲು ನಿರಂತರವೂ ಯತ್ನಮಾಡುತ್ತೇನೆ.

"ನನ್ನ ಮನಸ್ಸಿನಲ್ಲಿ ಬುದ್ಧಿಯ ಬೆಳಕನ್ನು ಇಟ್ಟಿರುವ ಸತ್ಯವೇ ನೀನು ಎಂಬುದನ್ನು ತಿಳಿದು ನನ್ನ ಯೋಚನೆಗಳಿಂದೆಲ್ಲ ಎಲ್ಲ ಅಸತ್ಯವನ್ನೂ ದೂರಮಾಡಲು ಯತ್ನಮಾಡುತ್ತೇನೆ.

"ನನ್ನ ಹೃದಯದ ಅಂತರಂಗದಲ್ಲಿ ನೀನು ನೆಲೆಸಿರುವುದನ್ನು ತಿಳಿದು ಕೆಟ್ಟುದೆಲ್ಲವನ್ನೂ ದೂರಮಾಡಿ ಪ್ರೇಮವನ್ನು ವಿಕಾಸವಾಗಿರಿಸಲು ಯತ್ನ ಮಾಡುತ್ತೇನೆ.

"ಕೆಲಸ ಮಾಡುವ ಬಲವು ನಿನ್ನ ಶಕ್ತಿಯಿಂದ ಬಂದದ್ದೆಂದು ತಿಳಿದು ಕೆಲಸದಲ್ಲೆಲ್ಲ ನಿನ್ನನ್ನು ತೋರ್ಪಡಿಸಲು ಯತ್ನಮಾಡುತ್ತೇನೆ."

ಕಾವ್ಯವನ್ನು ಕುರಿತು ಕವಿಗೆ ಇರುವ ಭಾವನೆಗಳು ಈ ಪದ್ಯಗಳಿಂದ ಸ್ಪಷ್ಟವಾಗುತ್ತವೆ:—

"ಈ ಹೂವನ್ನು ಒಡನೆಯೇ ಕಿತ್ತು ಸ್ವೀಕರಿಸು; ಇಲ್ಲದಿದ್ದರೆ ಅದು ಬಾಡಿ ಬಿದ್ದುಹೋಗಬಹುದು.

"ನಿನ್ನ ಹಾರದಲ್ಲಿ ಸೇರುವುದಕ್ಕೆ ಅದು ತಕ್ಕುದಲ್ಲದಿರಬಹುದು: ಆದರೂ ನಿನ್ನ ಕೈಯಿಂದ ಅದನ್ನು ಚಿವುಟ ತೆಗೆ. ನನಗೆ ತಿಳಿಯದೆ ಹಗಲೆಲ್ಲ ಕಳೆದು ಅರ್ಪಣದ ಕಾಲವು ಮೀರಿ ಹೋದೀತು.

"ಅದರ ಬಣ್ಣವು ಹೆಚ್ಚಲ್ಲದಿದ್ದರೂ, ಅದರ ಗಂಧವು ಮಿತವಾಗಿದ್ದರೂ, ಅದನ್ನು ನಿನ್ನ ಸೇವೆಯಲ್ಲಿ ಸ್ವೀಕರಿಸು. ಅವಕಾಶವಿರುವಾಗ ಅದನ್ನು ಕೀಳು."

* * * * * *

"ನನ್ನ ಗಾನವು ಒಡವೆಗಳನ್ನೆಲ್ಲ ತೆಗೆದುಹಾಕಿದೆ. ಉಡುಪು ತೊಡವುಗಳ ಡಂಭವು ಅದಕ್ಕಿಲ್ಲ. ಒಡವೆಗಳು ನನ್ನ ನಿನ್ನ ಸಮಾಗಮಕ್ಕೆ ಅಡ್ಡಿಯಾಗುವುವು. ನನ್ನ ಕಾವ್ಯದ ಜಂಬವು ನಿನ್ನ ಎದುರಿಗೆ ನಾಚಿಕೆಯಿಂದ ತೀರಿಹೋಯಿತು. ಕವಿಗಳ ಕವಿಯೇ ನಾನು ನಿನ್ನ ಅಡಿಯ ಬಳಿ ಕುಳಿತಿದ್ದೇನೆ. ನನಗೆ ಇನ್ನೇನೂ ಬೇಡ. ನೀನು ಗಾನದಿಂದ ತುಂಬಬೇಕಾದ ಕೊಳಲಿನಂತೆ ನನ್ನ ಜೀವನವನ್ನು ಸರಳವೂ ಸುಲಭವೂ ಆಗಿ ಮಾಡಿಕೊಂಡರೆ ಸಾಕು."

* * * * * *

"ದೊರೆಯ ಮಗನ ಉಡುಪನ್ನು ಉಟ್ಟು ಕೊರಳಿಗೆ ರತ್ನಮಯವಾದ ಸರಪಳಿಗಳನ್ನು ಹಾಕಿಕೊಂಡಿರುವ ಮಗು ಆಟದಿಂದ ಸುಖಪಡಲಾರದು. ಅದರ ತೊಡವು ಅಡಿಗಡಿಗೂ ಅದಕ್ಕೆ ಅಡ್ಡವಾಗಿರುತ್ತದೆ.

"ಬಟ್ಟೆ ಸುಲುಗುವುದು, ಮಣ್ಣಾಗುವುದು ಎಂಬ ಭಯದಲ್ಲಿ ಅದು ನೆಲವನ್ನು ಮುಟ್ಟದೆ, ಕದಲುವುದಕ್ಕೆ ಕೂಡ ಇಲ್ಲದೆ ನಿಲ್ಲುತ್ತದೆ."

ಗೀತಾಂಜಲಿಯ ಹಲವು ಪದ್ಯಗಳಲ್ಲಿ ಪರಮಾತ್ಮನು ನಮ್ಮ ಅಂತರಂಗದಲ್ಲಿ ಇದ್ದಾನೆ ಎಂಬ ವಿಷಯವು ಉಕ್ತವಾಗಿದೆ:—

"ದೂರದಲ್ಲೆಲ್ಲ ನಡೆದು ನಿನ್ನನ್ನು ಸೇರಬೇಕು. ಒಂದು ರಾಗವನ್ನು ಶುದ್ಧವಾಗಿ ನುಡಿಯುವುದಕ್ಕೆ ಬಹು ಕಷ್ಟವಾದ ಅಭ್ಯಾಸವಲ್ಲ ಬೇಕಾಗುವುದು.

"ಪ್ರಯಾಣಿಕನು ತನ್ನ ಮನೆಯನ್ನು ಸೇರುವುದಕ್ಕೆ ಬೇರೆ ಮನೆಯನ್ನೆಲ್ಲ ದಾಟಬೇಕು. ಪರವಸ್ತುವಿನ ಪೀಠವನ್ನು ಸೇರುವುದಕ್ಕೆ ಹೊರಗಣ ಪ್ರಪಂಚವನ್ನೆಲ್ಲ ದಾಟಬೇಕು.

"ನನ್ನ ದೃಷ್ಟಿಯು ಎಲ್ಲೆಲ್ಲೋ ಓಡಿಯಾಡಿ ಅಂತರ್ಮುಖವಾಯಿತು. ಅಂತರ್ಮುಖವಾಗಿ ನೀನು ಇಲ್ಲಿದ್ದೀಯಾ? ಎಂದಿತು."

*       *       *       *       *       *

"ತಾವರೆಯು ಅರಳಿದ ದಿನ ನನ್ನ ಮನಸ್ಸು ಎಲ್ಲಿಯೋ ಇದ್ದಿತು. ಅದು ಅರಳಿದ್ದು ನನಗೆ ತಿಳಿಯಲಿಲ್ಲ. ನನ್ನ ಪುಟ್ಟಿಯು ಬರಿದಾಗಿದ್ದರೂ ಹೂವಿನ ಕಡೆ ಮನಸ್ಸು ಹೋಗಲಿಲ್ಲ.

"ಮತ್ತೆ ಮತ್ತೆ ಮನಸ್ಸು ನೋಯುತಲಿತ್ತು. ಮುಂಪರದಿಂದೆದ್ದಾಗ ತಂಗಾಳಿಯಲ್ಲಿ ಒಂದು ವಿಶೇಷವಾದ ಸುವಾಸನೆಯು ತೋರಿತು.

"ಆ ಅವರ್ಣ್ಯವಾದ ಸುವಾಸನೆಯು ದೆಸೆಯಿಂದ ನನ್ನ ಹೃದಯವು ಆಸೆಯಿಂದ ಬಿಗಿಯಿತು. ಬೇಸಗೆಯ ಆತುರಪಟ್ಟ ಉಸಿರು ಸಫಲವಾಗುವುದಕ್ಕೆ ಯತ್ನಿಸುವಂತೆ ನನಗೆ ತೋರಿತು.

"ಆದರೆ ಅದು ಎಷ್ಟು ಹತ್ತಿರವಿತ್ತೆಂಬುದೂ ಅದು ನನ್ನದೆಂಬುದೂ ಆ ಕುಂದಿಲ್ಲದ ಗಂಧವು ನನ್ನ ಹೃದಯದ ಅಂತರಂಗದಲ್ಲಿ ವಿಕಾಸವಾಗಿತ್ತೆಂಬುದೂ ನನಗೆ ತಿಳಿಯಲಿಲ್ಲ."

ಮೊದಲನೆಯ ಪದ್ಯದಲ್ಲಿ, ಅಂತರಂಗದಲ್ಲಿ ಪರಮಾತ್ಮನಿರುವುದನ್ನು ಹೇಳಿ ಎರಡನೆಯದರಲ್ಲಿ ಅದು ತಿಳಿದಂತೆ ಹೇಳಿದೆ. ಈ ತಿಳಿವು ಬರಬೇಕಾದರೆ ಸುಲಭವಲ್ಲ. ಜೀವನದಲ್ಲಿ ಬಹುಕಾಲ ಈ ತಿಳಿವು ಬರುವುದಕ್ಕೆ ಆವಶ್ಯಕವಾದ ಸನ್ನಾಹದಲ್ಲಿಯೇ ಕಳೆದುಹೋಗುವುದು.—

"ನಾನು ಹೇಳುವುದಕ್ಕೆ ಬಂದ ಹಾಡು ಹೇಳದೆ ಹಾಗೆಯೇ ಇದೆ. ವೀಣೆಯ ತಂತಿಗಳನ್ನು ಬಿಗಿಮಾಡುವುದರಲ್ಲೂ ಸಡಿಲಮಾಡುವುದರಲ್ಲೂ ಕಾಲವೆಲ್ಲ ಕಳೆಯಿತು. ತಾಳ ಸರಿಬರಲಿಲ್ಲ; ಮಾತು ಸರಿಹೋಗಲಿಲ್ಲ; ಸರಿ ಆಗಬೇಕೆಂಬ ಆಸೆಯ ನೋವು ಮಾತ್ರ ಉಂಟಾಗಿದೆ.

"ಪುಷ್ಪವು ಅರಳಲಿಲ್ಲ; ಪಕ್ಕದಲ್ಲಿ ಗಾಳಿ ಮಾತ್ರ ಸುಯ್ಯೆನ್ನುತ್ತಿದೆ. ಅವನಿಗೆ ಮಣೆ ಹಾಕುವುದರಲ್ಲೇ ದಿನವೆಲ್ಲ ಕಳೆಯಿತು. ಇನ್ನೂ ದೀಪ ಹಚ್ಚಲಿಲ್ಲ; ಅವನನ್ನು ಬಾರೆಂದು ಕರೆಯುವುದಕ್ಕಿಲ್ಲ; ಅವನನ್ನು ಕಾಣುವೆನೆಂದೇನೋ ನಂಬಿದ್ದೇನೆ; ಇನ್ನೂ ಕಾಣಲಿಲ್ಲ."

ಇದಕ್ಕೆ ಕಾರಣವೇನೆಂದರೆ, ನಾವು ಲೋಭದ ದೆಸೆಯಿಂದ ಏನೇನೋ ಅಪೇಕ್ಷಿಸುತ್ತ ಪ್ರಪಂಚದಲ್ಲಿ ರೂಪವನ್ನು ಪಡೆದಿರುವ ಅವನ ಸೌಂದರ್ಯವನ್ನು ಎಣಿಸುವುದಿಲ್ಲ. ದೇವರು ನಮ್ಮ ಈ ಲೋಭವನ್ನು

ಬಿಡಿಸಿ ಈ ಸೌಂದರ್ಯವನ್ನೂ ಇತರ ನಿಜವಾಗಿಯೂ ಉತ್ತಮವಾದ ವಸ್ತುಗಳನ್ನೂ ಸಾಧಿಸುವಂತೆ ಮಾಡುತ್ತಾನೆ.—

"ದಿನದಿಂದ ದಿನಕ್ಕೂ ನೀನು ನನಗೆ ಕೇಳದೆ ಕೊಟ್ಟಿರುವ ಸುಲಭವೂ ಅಮೂಲ್ಯವೂ ಆದ ವಸ್ತುಗಳನ್ನನುಭವಿಸಲು ನನ್ನನ್ನು ತಕ್ಕವನಾಗಿ ಮಾಡುತ್ತಿದ್ದೀಯೆ. ದಿನದಿನವೂ ದುರ್ಬಲವಾದ, ಚಂಚಲವಾದ ಆಸೆಯ ತೊಡಕುಗಳಿಂದ ನನ್ನನ್ನು ಬಿಡಿಸಿ ನಿನ್ನ ಗ್ರಹಣಕ್ಕೆ ಅರ್ಹನನ್ನಾಗಿ ಮಾಡುತ್ತಿದ್ದೀಯೆ"

ಹೀಗೆ ಪರಮಾತ್ಮನನ್ನು ತಿಳಿಯುವುದಕ್ಕೆ ಸನ್ನದ್ಧನಾಗುವ ಕಾಲದಲ್ಲಿ ಜೀವನದ ಉದ್ದೇಶವು ಸರಿಯಾಗಿ ತಿಳಿಯದೆ ಕವಿಯು ಹೀಗೆನ್ನುತ್ತಾನೆ:—

"ಈ ಪ್ರಪಂಚದಲ್ಲಿ ನನಗೆ ಕೆಲಸವೇನೂ ತೋರಲಿಲ್ಲ. ಕೆಲಸವಿಲ್ಲದ ಈ ಜೀವನವು ಸಿಕ್ಕಿ ಸಿಕ್ಕದ ಹಾಡನ್ನು ಹಾಡುವುದರಲ್ಲಿ ಮುಗಿದಿದೆ.

"ವೀಣೆಯನ್ನು ನುಡಿಸುವುದು ನನ್ನ ಕೆಲಸವಾಗಿದ್ದಿತು; ನನ್ನ ಕೈಯಲ್ಲಾದಷ್ಟು ನುಡಿಸಿದ್ದೇನೆ. ಇನ್ನು ಬಂದು ನಿನಗೆ ನಮಸ್ಕಾರ ಮಾಡಬಹುದೇ?"

ಹೀಗೆ ಆಸೆಪಡುತ್ತ ಪರಮಾತ್ಮನ ದರ್ಶನವು ಸಿಕ್ಕದೆ ಇರಲು ಕವಿಯು ಪ್ರಿಯನಿಗೆ ಹೇಳುವಂತೆ ಪರಮಾತ್ಮನಿಗೆ ಹೀಗೆಂದು ಹೇಳುತ್ತಾನೆ:—

"ಮೋಡದ ಮೇಲೆ ಮೋಡ ಬಂದು ಒಡ್ಡುಗೂಡುತ್ತಿದೆ, ಕತ್ತಲಾಗುತ್ತಿದೆ. ನಿನಗೆ ಕಾಯುತ್ತ ಬಾಗಿಲ ಬಳಿ ಒಂಟಿಯಾಗಿ ನಿಲ್ಲುವಂತೆ ಏಕೆ ಮಾಡುವೆ?

"ಮಧ್ಯಾಹ್ನದಲ್ಲಿ ಕೆಲಸವಿರುವಾಗ ನಾನು ಎಲ್ಲರೊಂದಿಗೆ ಇರುತ್ತೇನೆ. ಬೇಸರವಾಗುವ ಈ ಮಂಕು ದಿನದಲ್ಲಿ ನೀನು ಬಂದೀಯೆ ಎಂದು ಕಾದಿರುತ್ತೇನೆ.

"ನೀನು ನನಗೆ ಮುಖವನ್ನು ತೋರಿಸದಿದ್ದರೆ, ನೀನು ನನ್ನನ್ನು ಒಂದು ಕಡೆ ತೊರೆದುಬಿಟ್ಟರೆ, ಈ ಬೇಸರದ ಮಳೆಯ ದಿನಗಳನ್ನು ಹೇಗೆ ಕಳೆಯುವುದೋ ತಿಳಿಯಲಿಲ್ಲ.

"ಎಲ್ಲಿಂದೆಲ್ಲಿಗೂ ಮುಚ್ಚಾಗಿರುವ ಆಕಾಶವನ್ನು ನೋಡುತ್ತ ನನ್ನ ಹೃದಯವು ಶಾಂತಿಯನ್ನರಿಯದ ಗಾಳಿಯೊಂದಿಗೆ ಗೋಳಿಡುತ್ತ ಅಲೆಯುತ್ತದೆ."

* * * * * *

"ನೀನು ನನ್ನೊಡನೆ ಮಾತನಾಡದೆ ಇದ್ದರೆ ನಾನು ಅದರಿಂದಲೇ ಮನಸ್ಸನ್ನು ತುಂಬಿ ತಡೆದುಕೊಳ್ಳುವೆನು. ರಾತ್ರಿಯು ನಕ್ಷತ್ರಗಳೊಡನೆ ಎಚ್ಚರವಾಗಿದ್ದು ತಾಳ್ಮೆಯಿಂದ ತಲೆಬಾಗಿ ಇರುವಂತೆ ಸುಮ್ಮನೆ ಕಾದಿರುವೆನು.

"ಉದಯವು ಬರಲೇ ಬರುವುದು. ಕತ್ತಲೆ ಹರಿಯುವುದು. ನಿನ್ನ ಧ್ವನಿಯು ಆಕಾಶ ಮಾರ್ಗದಲ್ಲಿ ಸ್ವರ್ಣ ಪ್ರವಾಹವಾಗಿ ಇಳಿದು ಬರುವುದು.

"ಆಗ ನಮ್ಮ ಪಕ್ಷಿಗಳ ಗೂಡುಗಳಿಂದೆಲ್ಲ ನಿನ್ನ ಮಾತು ಪಕ್ಷವನ್ನು ಧರಿಸಿ ಹಾಡಾಗಿ ಬರುವುದು. ನಿನ್ನ ಮಧುರ ಗಾನವು ನನ್ನ ಉದ್ಯಾನ ಗಳಲ್ಲೆಲ್ಲ ಪುಷ್ಪಗಳಾಗಿ ವಿಕಾಸವಾಗುವುದು.

ಹೀಗೆನ್ನುತ್ತ ಕೆಲವು ಕಾಲ ಕಳೆದ ಮೇಲೆಯೇ ಈ ಮೊದಲು ಹೇಳಿರುವಂತೆ ಪರವಸ್ತುವಿನ ತಿಳಿವು ತನ್ನಲ್ಲಿ ಅರಳುವಂತೆ ತಿಳಿಯುವುದು. ಆಗ ಪರಮಾತ್ಮನ ಇರವು ದೂರದಲ್ಲಿ ನುಡಿಸುವ ಕೊಳಲ ಸ್ವರದಂತೆ ಸ್ವಲ್ಪವಾಗಿ ತೋರಿಬರುವುದು. "ದೂರದಲ್ಲಿಯ ಗಾನದ ಸ್ವರಗಳು ಆಚೆಯ ದಡದಿಂದ ಹಾಯ್ದು ಬರುವುದರಿಂದ ಗಾಳಿಯಲ್ಲಿ ಇರುವ ಸಂಭ್ರಮವು ನಿನಗೆ ತಿಳಿಯುವುದಿಲ್ಲವೆ?"

ಪರಮಾತ್ಮನು ಬರುವಾಗ್ಗೆ ನಾವು ಅವನಿಗೆ ಸಿದ್ಧವಾಗಿರುವುದಿಲ್ಲ. ಯಾರೂ ಬಳಿಗೆ ಬರಲಾಗದಂತೆ ಮಾಡಿರುವ ಮಳೆಯ ದಿನದಲ್ಲಿ ಮಳೆ ಯನ್ನು ಲಕ್ಷ್ಯಮಾಡದೆ ತುಂಬಿ ಹರಿಯುವ ಹೊಳೆಯ ದಡದಲ್ಲಿ ಕತ್ತಲೆ ಯಿಂದ ಸಿಣುಕುತ್ತಿರುವ ಅರಣ್ಯ ಪ್ರದೇಶದಲ್ಲಿ ನಡೆದು ಪ್ರಿಯೆಯ ಬಳಿಗೆ ಬರುವ ಪ್ರಿಯನಂತೆ ನಾವು ಕಷ್ಟದಲ್ಲಿರುವಾಗ ಅವನು ಬರು ತ್ತಾನೆ. ಹಾಗೆ ಬಂದವನನ್ನು ತಿಳಿದೆವಾದರೆ ಪ್ರೀತಿಯಿಂದ ಸ್ವೀಕರಿ ಸುವೆವು. ಅವನು ಹಾಗೆ ಬಂದನೆಂದು ತಿಳಿಯುವುದಿಲ್ಲ. ಸಾಲದ್ದಕ್ಕೆ ಅಂಥ ಕಷ್ಟದ ದಿನಗಳಲ್ಲಿ ನಾವು ಸೋತಿರುತ್ತೇವೆ. ನಮಗೆ ಯಾವುದೂ ಬೇಕಾಗುವುದಿಲ್ಲ. ಆಗಲೂ ಪರಮಾತ್ಮನ ಕೃಪೆಯಿಂದಲೇ ನಮಗೆ ಸಮಾಧಾನ ಉಂಟಾಗಬೇಕು; ಸೋತ ಮನಸ್ಸಿಗೆ ವಿಶ್ರಾಂತಿ ಬರ ಬೇಕು. ನಮ್ಮ ಪ್ರಯತ್ನದಿಂದ ಮಾತ್ರ ದೇವರು ನಮಗೆ ಸಾಧ್ಯ ವಾಗುವುದಿಲ್ಲ.—

"ಸೋತಿರುವ ದಿನ ವ್ಯರ್ಥವಾಗಿ ಕಷ್ಟಪಡದೆ ನಿನ್ನ ಮೇಲೆ ನಂಬಿಕೆಯನ್ನಿಟ್ಟು ನಿದ್ರೆಮಾಡುತ್ತೇನೆ. ನಿನ್ನ ಅರ್ಚನೆಗಾಗಿ ಸೋತ ಮನಸ್ಸನ್ನು ಹೇಗೋ ಹಾಗೆ ಪ್ರಯತ್ನಪಡುವಂತೆ ಬಲಾತ್ಕಾರ ಪಡಿಸುವುದಿಲ್ಲ.

"ಹಗಲು ಸೋತಾಗ ಅದರ ಮೇಲೆ ವಿಶ್ರಾಂತಿಗಾಗಿ ನೀನು ರಾತ್ರಿಯನ್ನು ಮುಸುಕು ಹಾಕಿರುತ್ತೀಯೆ. ಅದು ಮತ್ತೆ ಹೊಸದಾಗಿ ಸಂತೋಷದಿಂದ ಎಚ್ಚತ್ತು ತನ್ನ ನೋಟವನ್ನು ಪಡೆಯುವುದು."

ಹತ್ತಾರು ಸಲ ಪರಮಾತ್ಮನ ಸಂದರ್ಶನವು ಆಗಬಹುದಾದ ಸಂದರ್ಭದಲ್ಲಿ ಆಗದೆ ಹೋದಾಗ ಈ ಸಂದರ್ಭಗಳೆಲ್ಲ ವ್ಯರ್ಥವಾದುವಲ್ಲ ಎಂಬ ಖೇದವುಂಟಾಗುವುದು.—

"ರಾತ್ರಿಯು ನಿಶ್ಶಬ್ದವಾಗಿದ್ದಾಗ ಅವನು ಬಂದನು. ಅವನ ಕೈಯಲ್ಲಿ ವೀಣೆ ಇದ್ದಿತು. ಅದರ ಸ್ವರದಿಂದ ನನ್ನ ಸ್ವಪ್ನವು ಝೇಂಕಾರಮಯವಾಯಿತು. ಆದರೂ ನಾನು ಏಳಲಿಲ್ಲ."

ಅವನು ಬಂದದ್ದು ತಿಳಿಯಬೇಕಾದರೆ ನಾವು ಲೋಭವನ್ನೂ ಮೋಹವನ್ನೂ ಬಿಡಬೇಕು. ಆಸೆಗಳನ್ನೆಲ್ಲ ಸುಟ್ಟು ಆ ಬೆಳಕಿನಿಂದ ಅವನನ್ನು ಕಾಣಬೇಕು. ಆಸೆಯನ್ನು ಸುಡಬೇಕೆಂದು ತಿಳಿದರೂ ಸುಡುವುದಕ್ಕೆ ಮನಸ್ಸು ಬರುವುದಿಲ್ಲ.—

"ಈ ಕಟ್ಟುಗಳು ನನ್ನನ್ನು ಕದಲುವುದಕ್ಕೆ ಬಿಡುವುದಿಲ್ಲ. ಆದರೂ ಅವುಗಳನ್ನು ಬಿರಿಯೋಣವೆಂದರೆ ಅವು ಹೋಗುವುವಲ್ಲಾ ಎಂದು ಮನಸ್ಸು ನೋಯುತ್ತದೆ.

"ನನಗೆ ಬೇಕಾದದ್ದು ಬಿಡುಗಡೆ; ಅದನ್ನು ಕೋರುವುದಕ್ಕೆ ನಾಚುತ್ತೇನೆ.

"ನನ್ನ ಹೊದಿಕೆಯು ಮಣ್ಣಿನ ಹೊದಿಕೆ: ಸಾವಿಗೆ ಸಿಕ್ಕಿದ್ದು: ಅದನ್ನು ನಾನು ಸಹಿಸಲಾರೆನು. ಆದರೂ ಅದನ್ನು ಪ್ರೀತಿಯಿಂದ ಹಿಡಿದು ಭದ್ರವಾಗಿ ಹೊದ್ದುಕೊಳ್ಳುತ್ತೇನೆ.

"ನನ್ನ ಕಡಗಳು ಹೆಚ್ಚು: ನನ್ನ ಸೋಲು ದೊಡ್ಡದು: ನನ್ನ ಪರಾಭವವು ಗುಪ್ತವಾದುದು, ಭಾರವಾದುದು: ಆದರೂ ನನ್ನ ಹಿತವನ್ನು ನಾನು ಕೇಳಿಕೊಳ್ಳುವುದಕ್ಕೆ ಬಂದಾಗ ಅದನ್ನು ಕೊಟ್ಟೀಯೆ ಎಂದು ಹೆದರಿಕೆಯಾಗುತ್ತದೆ."

ನಾವು ಹೀಗೆ ಮುಗ್ಧರಾಗಿ ಬಾಳುವುದರಿಂದ ಚಿತ್ಸ್ವರೂಪಿಯಾದ ನಮ್ಮ ಆತ್ಮದ ಸ್ವಭಾವವನ್ನು ಮರೆಯಿಸುತ್ತಿದ್ದೇವೆಂಬುದನ್ನು ಹೀಗೆಂದು ಕವಿಯು ವಿವರಿಸಿದ್ದಾನೆ:—

"ನನ್ನ ಹೆಸರಿನಿಂದ ನಾನು ಕವಿದಿರುವ ಆತ್ಮನು ಈ ಸೆರೆಯಲ್ಲಿ ಸಿಕ್ಕಿ ನರಳುತ್ತಿದ್ದಾನೆ. ನಾನು ಸುತ್ತ ಈ ಗೋಡೆಯನ್ನು ಕಟ್ಟುವುದರಲ್ಲಿಯೇ ಸರ್ವದಾ ನಿಂತಿದ್ದೇನೆ. ದಿನದಿಂದ ದಿನಕ್ಕೆ ಈ ಗೋಡೆ ಆಕಾಶಕ್ಕೆ ಎದ್ದ ಹಾಗೆ ಅದರ ಕತ್ತಲಲ್ಲಿ ನನ್ನ ಆತ್ಮದ ಸ್ವಭಾವವನ್ನು ಮರೆಯುತ್ತಿದ್ದೇನೆ.

"ಈ ದೊಡ್ಡ ಗೋಡೆಯಲ್ಲಿ ನನಗೆ ಬಹಳ ಉತ್ಸಾಹ. ಅದರಲ್ಲಿ ಸ್ವಲ್ಪವಾದರೂ ಬಿರುಕು ಇರಬಾರದೆಂದು ಮಣ್ಣು ಮರಳಿನಿಂದ ಅದಕ್ಕೆ ಗಾರೆ ಹಾಕುತ್ತಿದ್ದೇನೆ. ವಿಶ್ವಪ್ರಯತ್ನದಿಂದಲೂ ನನ್ನ ಸ್ವರೂಪವನ್ನು ಮರೆಯುತ್ತಿದ್ದೇನೆ."

ನಮ್ಮ ನಿಜವಾದ ಸ್ವಭಾವವನ್ನು ಮರೆತು ಈ ಗೋಡೆಯನ್ನು ಕುರಿತ ಉತ್ಸಾಹದಲ್ಲಿರುವುದರಿಂದ ನಾವು ದೇವರ ಬಳಿ ಸೇರಿ ಜ್ಞಾನ ಬಂದಾಗಲೂ ನಮ್ಮ ಅಲ್ಪ ಸ್ವಭಾವವು ನಮಗೆ ಅಡ್ಡವಾಗಿರುವುದು.—

"ಅವನನ್ನು ಬಿಡುವುದಕ್ಕೆ ಒಂದು ಪಕ್ಕಕ್ಕೆ ನಿಂತರೂ ಅವನಿಂದ ತಪ್ಪಿಸಿಕೊಳ್ಳಲಾಗಲಿಲ್ಲ.

"ನಡೆಯುವ ರಭಸದಿಂದ ಅವನು ಧೂಳನ್ನು ಎಬ್ಬಿಸುತ್ತಿದ್ದಾನೆ. ನಾನು ಆಡುವ ಮಾತು ಮಾತಿಗೂ ಅವನ ಗಂಟಲನ್ನು ಸೇರಿಸುತ್ತಿದ್ದಾನೆ.

"ಒಡೆಯ! ಅವನು ನನ್ನ ಅಲ್ಪಾತ್ಮನು. ಅವನಿಗೆ ನಾಚಿಕೆಯಿಲ್ಲ. ಆದರೆ ಅವನೊಂದಿಗೆ ನಿನ್ನಲ್ಲಿ ಬರುವುದಕ್ಕೆ ನನಗೆ ನಾಚಿಕೆಯಾಗುತ್ತಿದೆ."

ಎಂದರೆ, ನಮ್ಮ ಜೀವನವನ್ನು ಸರಿಯಾದ ದಾರಿಯಲ್ಲಿಟ್ಟುಕೊಳ್ಳದೆ ಕಾಮ ಕ್ರೋಧಾದಿಗಳಿಂದ ಆತ್ಮದ ಸ್ವರೂಪವನ್ನು ಕೆಡಿಸಿದೆವಾದರೆ ಕೊನೆಗೂ ಅವು ನಮಗೆ ಕಚ್ಚಿಕೊಂಡೇ ಇರುವುವು. ಅವುಗಳನ್ನು ಬಿಟ್ಟರಲ್ಲದೆ ಮುಕ್ತಿಯಿಲ್ಲ.

ನಮಗೆ ಅಡ್ಡ ಬರುವ ಗುಣಗಳು ನಮ್ಮಲ್ಲೇ ಸೇರಿಹೋಗಿರುವಂತೆ ನಾವು ಸಂಪಾದಿಸುವ ಪದಾರ್ಥಗಳೂ ದೇವರ ಕಾರ್ಯಕ್ಕೆ ವಿನಿಯೋಗವಾಗದಿದ್ದರೆ ನಮಗೆ ಸಂಕಲೆಗಳಾಗುವುವು.

“ಬಂದೀ ! ನಿನ್ನನ್ನು ಬಂಧಿಸಿದವರಾರು ?

“ಬಂದಿ ಎಂದನು :— ‘ನನ್ನ ಒಡೆಯನು ಬಂಧಿಸಿದನು. ಹಣದಿಂದಲೂ ಬಲದಿಂದಲೂ ಎಲ್ಲರಿಗಿಂತ ಮುಂದಾಗಬೇಕೆಂದು ನನ್ನ ದೊರೆಗೆ ಸೇರಬೇಕಾದ ಹಣವನ್ನು ನನ್ನ ಮನೆಯಲ್ಲಿ ಸೇರಿಸಿಟ್ಟೆನು. ನಿದ್ದೆ ಬಂದಾಗ ನನ್ನ ದೊರೆಗಾಗಿ ಹಾಕಿದ ಹಾಸಿಗೆಯಲ್ಲಿ ನಾನು ಮಲಗಿದೆನು. ಎಚ್ಚರವಾದಾಗ ನನ್ನ ಹಣದ ಮನೆಯಲ್ಲಿ ನಾನು ಬಂದಿಯಾಗಿದ್ದೆನು.

“ಬಂದೀ ! ಈ ಬಲವಾದ ಸರಪಳಿಯನ್ನು ಮಾಡಿದವರಾರು ?

“‘ನಾನೇ ಈ ಸರಪಳಿಯನ್ನು ಚೆನ್ನಾಗಿ ಮಾಡಿದವನು. ನಾನು ಪ್ರಪಂಚವನ್ನೆಲ್ಲ ನನ್ನ ಅಜೇಯವಾದ ಶಕ್ತಿಯಿಂದ ಸೆರೆಹಿಡಿದು ನಾನು ಬಿಡುವಾಗಿರಬೇಕೆಂದು ಆಲೋಚಿಸಿದೆನು. ರಾತ್ರಿಯೂ ಹಗಲೂ ದೊಡ್ಡ ಕೊಲ್ಲಿಮೈಗಳನ್ನಿಟ್ಟು ಉಗ್ರ ತಾಡನಗಳಿಂದ ಈ ಸರಪಳಿಯನ್ನು ಮಾಡಿದೆನು. ಕೆಲಸ ಕೊನೆಗಂಡು ಕೊಂಡಿಗಳೆಲ್ಲ ಮುಗಿದು ಭದ್ರವಾದಾಗ ನೋಡಲು ಅದು ನನನ್ನು ಹಿಡಿದುಕೊಂಡಿದ್ದಿತು.’’’

ಇದೇ ಭಾವವನ್ನು ಕವಿಯು ಇನ್ನೊಂದು ಪದ್ಯದಲ್ಲಿ, ಸ್ವಲ್ಪ ಜಾಗವಾದರೆ ಮಾತ್ರ ಸಾಕು ಎಂದು ಸಾತ್ವಿಕರಂತೆ ಮನೆಗೆ ಬಂದು ರಾತ್ರಿಯಲ್ಲಿ ದೇವರ ಪೀಠದಿಂದ ಪ್ರಸಾದವನ್ನು ಕದಿಯನೋಡಿದರು ಎಂಬ ವರ್ಣನೆಯಿಂದ ತಿಳಿಸಿದ್ದಾನೆ. ಒಂದು ಉದ್ದೇಶಕ್ಕಾಗಿ ಉಂಟಾಗುವ ಈ ಪ್ರಪಂಚದ ಸಂಬಂಧಗಳು ಮೊದಲಲ್ಲಿ ಸ್ವಲ್ಪಮಟ್ಟಿಗೆ ಉಂಟಾಗಿ ಕೊನೆಗೆ ದೇವರಿಗೆ ಸೇರಬೇಕಾದ ಭಕ್ತಿ ವಿಶ್ವಾಸಗಳನ್ನು ಸೆಳೆದುಕೊಳ್ಳುವುವೆಂದು ಇದರ ಅಭಿಪ್ರಾಯ. ನಾವು ಪರಮಾತ್ಮನ ದರ್ಶನಕ್ಕೆ ಅರ್ಹರಾಗಬೇಕಾದರೆ ಇದೆಲ್ಲವನ್ನೂ ಬಿಡಬೇಕು. ಅವನೇ ನಮ್ಮ ಸರ್ವಸ್ವವು ಎಂದು ನಂಬಬೇಕು.

“ನೀನೇ ನನ್ನ ಸರ್ವಸ್ವವು ಎನ್ನುವುದಕ್ಕೆ ನಾನು ಎಷ್ಟಿದ್ದರೆ ಸಾಕೋ ನನ್ನ ಆತ್ಮದ ಅಷ್ಟು ಭಾಗ ಮಾತ್ರ ಉಳಿಯಲಿ.

“ನಿನ್ನನ್ನು ಎಲ್ಲೆಲ್ಲಿಯೂ ನೋಡುವುದಕ್ಕೂ ಎಲ್ಲದರ ಮೂಲಕ ನಿನ್ನನ್ನು ಸೇರುವುದಕ್ಕೂ ನಿನಗೆ ನನ್ನ ಭಕ್ತಿಯನ್ನು ಸರ್ವದಾ ಅರ್ಪಿಸುವುದಕ್ಕೂ ನನ್ನ ಮನಸ್ಸಿನ ಎಷ್ಟು ಭಾಗವು ಇದ್ದರೆ ಸಾಕೊ ಅದರ ಅಷ್ಟು ಭಾಗ ಮಾತ್ರ ಉಳಿಯಲಿ.

“ನಾನು ಎಷ್ಟು ಉಳಿದರೆ ನಿನ್ನನ್ನು ಮುಚ್ಚದಂತೆ ಇರುವೆನೊ ನನ್ನ ಅಷ್ಟು ಮಾತ್ರ ಉಳಿಯಲಿ. ನನ್ನ ಬಂಧನದಲ್ಲಿ ಎಷ್ಟು ಇದ್ದರೆ ನಾನು

ನಿನ್ನ ಇಷ್ಟದಿಂದ ಬದ್ಧನಾಗಿ ನಿನ್ನ ಉದ್ದೇಶವನ್ನು ನನ್ನ ಜೀವನದಲ್ಲಿ ನಡೆಯಿಸಬಹುದೊ ಅಷ್ಟು ಬಂಧನ ಮಾತ್ರ ಉಳಿದಿರಲಿ.

ಅವನನ್ನೇ ನಂಬಿ ಅವನನ್ನು ತಿಳಿಯುವುದಕ್ಕೆ ನಾವು ಪ್ರಯತ್ನ ಮಾಡುತ್ತಿದ್ದರೆ ಎಷ್ಟು ಸಾವಕಾಶವಾದರೂ ಪರಮಾತ್ಮನು ನಮಗಾಗಿ ಕಾದಿರುವನು.—

"ಸಂಸಾರದಲ್ಲಿ ಇಷ್ಟರಾದವರು ನನ್ನನ್ನು ಭದ್ರವಾಗಿ ಹಿಡಿದಿರುವರು. ನನ್ನ ಮೇಲೆ ಅವರಿಗಿರುವ ಪ್ರೀತಿಗಿಂತ ನಿನಗಿರುವ ಪ್ರೀತಿಯು ಹೆಚ್ಚಾದರೂ ನೀನು ನನ್ನನ್ನು ಬಲಾತ್ಕಾರಪಡಿಸುವುದಿಲ್ಲ.

"ಅವರನ್ನು ಮರೆತೇನೆಂಬ ಭಯದಿಂದ ಅವರು ನನ್ನನ್ನು ನನ್ನ ಪಾಡಿಗೆ ಸುಮ್ಮನೆ ಬಿಡುವುದೇ ಇಲ್ಲ. ನೀನಾದರೋ ದಿನದ ಮೇಲೆ ದಿನ ಕಳೆದರೂ ಕಣ್ಣಿಗೇ ಬೀಳುವುದಿಲ್ಲ.

"ನನ್ನ ಧ್ಯಾನದಲ್ಲಿ ನಿನ್ನನ್ನು ಕರೆಯದಿದ್ದರೂ, ನನ್ನ ಮನಸ್ಸಿನಲ್ಲಿ ನಿನ್ನನ್ನಿರಿಸದಿದ್ದರೂ, ನಿನ್ನ ಪ್ರೇಮವು ಬೇಸರಪಡದೆ ನನ್ನ ಪ್ರೇಮಕ್ಕಾಗಿ ಕಾದಿರುವುದು."

ನಮಗೆ ತಿಳಿದರೂ ತಿಳಿಯದಿದ್ದರೂ ಪರಮಾತ್ಮನೇ ನಮಗೆ ಗತಿ. ಇದನ್ನು ಮನನ ಮಾಡುವುದು ಆವಶ್ಯಕ.—

"ನನಗೆ ಬೇಕಾದುದು ನೀನೇ, ಮತ್ತೇನೂ ಅಲ್ಲ, ಎಂಬುದನ್ನು ನನ್ನ ಹೃದಯವು ಮತ್ತೆ ಮತ್ತೆ ನೆನೆಯಲಿ. ಹಗಲೂ ಇರುಳೂ ನನ್ನನ್ನು ಚಪಲಗೊಳಿಸುವ ಆಸೆಗಳೆಲ್ಲ ಮಿಥ್ಯವಾದುವು. ರಾತ್ರಿಯು ತನ್ನ ಅಂಧಕಾರದಲ್ಲಿ ಬೆಳಕು ಬೇಕೆಂಬ ಪ್ರಾರ್ಥನೆಯನ್ನು ಇರಿಸಿಕೊಂಡಿರುವಂತೆ ನನ್ನ ಅಜ್ಞಾನದ ಅಂತರ್ಯದಲ್ಲಿ ಈ ಪ್ರಾರ್ಥನೆಯು ಸೇರಿದೆ. ನನಗೆ ಬೇಕಾದುದು ನೀನೇ, ಇನ್ನೇನೂ ಅಲ್ಲ.

"ಶಾಂತಿಯನ್ನು ತನ್ನ ಶಕ್ತಿ ಸರ್ವಸ್ವದಿಂದ ವಿಚ್ಛೇದಮಾಡುವಾಗಲೂ, ಬಿರುಮಳೆಯು ತಾನು ಮುಗಿದು ಶಾಂತವಾಗಬೇಕೆಂದು ಅಪೇಕ್ಷಿಸುತ್ತಿರುವಂತೆ, ನಾನು ನಿನ್ನನ್ನು ಮೀರಿ ನಡೆದರೂ ಆ ನಡತೆಯಲ್ಲಿ ಈ ಯೋಚನೆ ಇದೆ; ನನಗೆ ನೀನು ಬೇಕು, ಇನ್ನೇನೂ ಬೇಡ."

ಭಕ್ತನು ಪರಮಾತ್ಮನಿಗಾಗಿ ಕಾದಿರುವುದು ಇತರರಿಗೆ ಹೇಗೆ ಕಾಣುವುದೆನ್ನುವುದನ್ನು ಕವಿಯು ಹೀಗೆ ವರ್ಣಿಸುತ್ತಾನೆ:—

"ಬೆಳಿಗ್ಗೆಯೆಲ್ಲ ಕಳೆಯಿತು; ಮಧ್ಯಾಹ್ನವೂ ಕಳೆಯಿತು; ಸಂಜೆಯು ಮುಸುಕಿನಲ್ಲಿ ನಿದ್ರೆಯಿಂದ ಕಣ್ಣು ಜೋಲುಬಿದ್ದಿದೆ. ಮನೆಗೆ

The morning time is passed and the noon. In the shade of evening my eyes

Going home glance at me and smile and fill me with shame. I sit like a beggar maid drawing my skirt over my face and when they ask me what it is I want, I drop my eyes and answer them not.



ಹೋಗುವ ಜನರು ನನ್ನನ್ನು ನೋಡಿ ಸ್ವಲ್ಪ ನಗುವರು. ನನಗೆ ನಾಚಿಕೆಯಾಗುತ್ತದೆ. ಭಿಕ್ಷುಕಳ ಹಾಗೆ ಮುಖವನ್ನು ಮರೆಮಾಡಿಕೊಂಡು ಕುಳಿತಿದ್ದೇನೆ. ಅವರು ನನ್ನನ್ನು ಏನು ಬೇಕು ಎಂದು ಕೇಳಿದಾಗ ನಾನು ಕುತ್ತಿಗೆಯನ್ನು ತಗ್ಗಿಸಿ ಸುಮ್ಮನಿರುತ್ತೇನೆ.''

ಏನು ಬೇಕು ಎಂದರೆ ಪರಮಾತ್ಮನು ಬಂದು ನಮ್ಮನ್ನು ಸ್ವೀಕರಿಸಬೇಕು. ಇದನ್ನು ಏನೆಂದು ಹೇಳುವುದು? ಪುರುಷೋತ್ತಮನು ತನ್ನ ಪದವಿಯಿಂದಿಳಿದು ಬಂದು ನರಾಧಮನನ್ನು ಹೇಗೆ ಸ್ವೀಕರಿಸುವನು? ಹೀಗೆಂದು ಅವರು ಹೇಳುವರು. ಆದರೆ ಪರಮಾತ್ಮನು ಬಂದು ಈ ಆತ್ಮವನ್ನು ಸ್ವೀಕರಿಸುವುದರಲ್ಲಿ ಸಂದೇಹವಿಲ್ಲ. ಏಕೆಂದರೆ, ಚಿಕ್ಕಂದಿನಲ್ಲಿ ಈ ಆತ್ಮವು ಪರವಸ್ತುವಿನೊಂದಿಗೆ ಆಟವಾಡಿರುತ್ತದೆ. ಪರಮಾತ್ಮನ ಸೌಂದರ್ಯವೂ ಆನಂದವೂ ಅದಕ್ಕೆ ತಿಳಿದಿರುತ್ತದೆ. ಚಿಕ್ಕ ವಯಸ್ಸಿನ ಉತ್ಸಾಹವೆಲ್ಲಕ್ಕೂ ಪರಮಾತ್ಮನ ಸ್ವೀಕಾರವೇ ಸಾಫಲ್ಯವು.—

The vision

''ದಿನದ ಆರಂಭದಲ್ಲಿ ಯಾರೋ ನನ್ನ ಕಿವಿಯಲ್ಲಿ ನೀನೂ ನಾನೂ ಮಾತ್ರ ದೋಣಿಯಲ್ಲಿ ಕುಳಿತು ಹೋಗಬೇಕೆಂದೂ ಯಾವ ಸೀಮೆಗೂ ಯಾವ ಕೆಲಸಕ್ಕೂ ಅಲ್ಲದ ಈ ಪ್ರಯಾಣದ ವಿಷಯವು ಇನ್ನು ಯಾರಿಗೂ ತಿಳಿಯಕೂಡದೆಂದೂ ಹೇಳಿದಂತಿದ್ದಿತು. ತೀರವಿಲ್ಲದ ಆ ಸಾಗರದಲ್ಲಿ ನೀನು ಮಂದಸ್ಮಿತನಾಗಿ ಕುಳಿತು ಸುಮ್ಮನೆ ಕೇಳುವಮಟ್ಟಿಗೆ ನನ್ನ ಗಾನವು ಮಾಧುರ್ಯವನ್ನು ಪಡೆದು, ಸಮುದ್ರದ ತೆರೆಗಳಂತೆ ಧಾರಾಳವಾಗಿ ಮಾತಿನ ಬಂಧನಕ್ಕೆ ಸಿಕ್ಕದೆ ಇರುವುದು ಎಂದು ಹೇಳಿದಂತೆ ಇದ್ದಿತು. ಆ ಕಾಲ ಇನ್ನೂ ಬರಲಿಲ್ಲವೊ?''

ಎಂದರೆ, ಚಿಕ್ಕ ವಯಸ್ಸಿನ ಉತ್ಸಾಹದಲ್ಲಿ ಏನೇನೋ ಕೆಲಸವನ್ನು ಮಾಡಿಸಬೇಕೆಂದು ತೋರುವುದಷ್ಟೆ. ಕವಿಯ ಅಭಿಪ್ರಾಯದಲ್ಲಿ ಜೀವಾತ್ಮವು ಪರಮಾತ್ಮದ ಸ್ವರೂಪವನ್ನು ಸಾಧಿಸುವುದಕ್ಕೆ ಪಡುವ ಅಪೇಕ್ಷೆಯೇ ಈ ಉತ್ಸಾಹವು.

ಪರಮಾತ್ಮನು ಬರುವನೆಂಬುದು ಸ್ಪಷ್ಟವಾಗಬೇಕಾದರೆ ಸಾವಕಾಶವಾದರೂ ಅವನು ಆಗಾಗ ಸ್ವಲ್ಪ ಸ್ವಲ್ಪ ಮಟ್ಟಿಗೆ ನಮ್ಮನ್ನು ತನ್ನ ಕಡೆಗೆ ತಿದ್ದಿಕೊಳ್ಳುತ್ತಲೇ ಇರುವನು.—

''ಒಂದು ಸಮಯದಲ್ಲಿ ನಾನು ನಿನಗೆ ತಕ್ಕವನಾಗಿರಲಿಲ್ಲ. ಆಗ ಇತರರು ಹೇಗೋ ಹಾಗೆ ಕಾಣುತ್ತ ನಾನು ನಿನ್ನನ್ನು ಬಾ ಎನ್ನದಿದ್ದರೂ

The day was when I did not keep myself in readiness for thee; and entering

common crowd, unknown to me, my king, thou didst press the signet of eternity upon many a fleeting moment of my life



ನೀನು ನನ್ನ ಮನಸ್ಸಿಗೆ ಬಂದು ನನ್ನನ್ನೇ ಅರಿಯದಂತೆ ಅಸ್ಥಿರವಾದ ಕೆಲವು ಕ್ಷಣಗಳಲ್ಲಿ ನಿನ್ನ ಸ್ಥಿರ ಜೀವನದ ಮುದ್ರೆಯನ್ನೊತ್ತಿದೆ.''

ನಾವು ಅಪೇಕ್ಷಿಸುವ ಅನೇಕ ವಸ್ತುಗಳಲ್ಲಿ ಕೆಲವಕ್ಕೆ ಒಂದು ವ್ಯಕ್ತವಾದ ಆಸೆಯ ಕಾರಣದಿಂದ ಕೆಲವಕ್ಕೆ ಅವುಗಳ ಮಹತ್ವದ ಕಾರಣದಿಂದ ಮನಸ್ಸು ಸೋಲುವುದು. ಆಸೆ ಇರುವಲ್ಲಿ ಅವುಗಳನ್ನಪೇಕ್ಷಿಸುವ ಮನೋವೃತ್ತಿಯನ್ನು ಲೋಭವೆನ್ನಬಹುದು. ಅಂಥ ಆಸೆ ಇಲ್ಲದಲ್ಲಿ ಅದು ಭಗವಂತನ ವಿಭೂತಿಯ (ಮಹಿಮೆ) ವ್ಯಕ್ತ ಸ್ವರೂಪದ ಅರ್ಚನವು. ಹೀಗೆಯೇ ಕಾದಿರಲು ಭಗವಂತನು ಬರುತ್ತಿರುವುದು ಕೊಂಚ ಕೊಂಚವಾಗಿ ತಿಳಿದುಬರುವುದು. ದೇವರು ಬರುತ್ತಿರುವುದನ್ನು ಕವಿಯು ಹೀಗೆ ವರ್ಣಿಸಿರುವನು :—

''ಅವನು ಮೆಲ್ಲಗೆ ಬರುತ್ತಿರುವುದು ನಿನಗೆ ತಿಳಿಯದೆ? ಅವನು ಬರುತಲಿರುವನು. ಗಳಿಗೆ ಗಳಿಗೆಯೂ ಯುಗಾಂತರಗಳಿಂದಲೂ ಹಗಲಲ್ಲಿಯೂ ಇರುಳ ನಡುವೆಯೂ ಅವನು ಬರುತಲಿರುವನು; ಮೆಲ್ಲಗೆ ಬರುತಲಿರುವನು. (ಫಾಲ್ಗುಣದ ಸುವಾಸಿತವಾದ ಬಿಸಿಲ ದಿನದಲ್ಲಿ ಅರಣ್ಯ ಮಧ್ಯದ ದಾರಿಯಲ್ಲಿ ಅವನು ಬರುತಲಿರುವನು) ಮೆಲ್ಲಗೆ ಬರುತಲಿರುವನು. (ಆಷಾಢದ ರಾತ್ರಿಯ ಮಳೆಯ ಕತ್ತಲೆಯಲ್ಲಿ ಮೋಡಗಳ ಗುಡುಗಿನ ಚಕ್ರಗಳ ತೇರಿನಲ್ಲಿ ಅವನು ಬರುತಲಿರುವನು.) ಮೇಲೆ ಮೇಲೆ ಬರುವ ದುಃಖಗಳಲ್ಲಿ ನನ್ನ ಹೃದಯವನ್ನು ಮುಟ್ಟುವುದು ಅವನ ಅಡಿ. ಸುಖದಲ್ಲಿ ಬೆಳಗುವುದು ಆ ಅಡಿಯ ಸ್ವರ್ಣ ಪ್ರಭೆ.''

ಕಷ್ಟದಲ್ಲಿಯೂ ಸುಖದಲ್ಲಿಯೂ ಸ್ವಲ್ಪ ಸ್ವಲ್ಪವಾಗಿ ಹತ್ತಿರ ಬಂದು ಪರಿಚಯವನ್ನು ಬೆಳೆಯಿಸಿ ಕೊನೆಗೆ ಪರಮಾತ್ಮನು ಪ್ರತ್ಯಕ್ಷನಾಗುವನು. ಇದು ಕೇವಲ ತಪಸ್ಸಿನಿಂದಲೂ ಕರ್ಮಯೋಗದಿಂದಲೂ ಸಾಗಬೇಕೆಂಬುದಿಲ್ಲ. ಅವನನ್ನು ಅಪೇಕ್ಷಿಸಿ ನಮ್ಮ ಕೈಯಲ್ಲಾದಷ್ಟು ದೂರವೂ ನಡೆದರೆ ಸಾಕು. ನಾವು ಸೋತು ಅಲ್ಲಿಯೇ ನಿಂತರೂ ಅವನು ನಮ್ಮ ಬಳಿಗೆ ಬರುವನು.—

The morning sea of silence broke into ripples of song

''ನಿಶ್ಶಬ್ದವಾದ ಉದಯ ಸಮುದ್ರವು ಸಣ್ಣ ಅಲೆಗಳಿಂದ ಎಂಬಂತೆ ಹಕ್ಕಿಗಳ ಹಾಡಿನಿಂದ ಚಲಿಸಿತು. ದಾರಿಯ ಪಕ್ಕದಲ್ಲಿ ಪುಷ್ಪಗಳು ಆನಂದದಿಂದ ತುಂಬಿದ್ದುವು. ಮೋಡಗಳ ಬಿರುಕಿನಲ್ಲಿ ಚಿನ್ನದ ರಾಶಿಯು ಸುರಿದಿದ್ದಿತು. ನಾವು ಇದೊಂದನ್ನೂ ನೋಡದೆ ನಮ್ಮ ದಾರಿ ನಡೆಯುತ್ತಿದ್ದೆವು.

''ನಾವು ಗಾನವೇನನ್ನೂ ಮಾಡಲಿಲ್ಲ; ಹಳ್ಳಿಗೆ ವ್ಯಾಪಾರಕ್ಕೆ ಹೋಗಲಿಲ್ಲ; ಒಂದು ಮಾತೂ ಆಡಲಿಲ್ಲ; ನಗಲಿಲ್ಲ; ದಾರಿಯಲ್ಲಿ ಕಾಲವನ್ನು ಕಳೆಯಲಿಲ್ಲ; ಹೊತ್ತು ಹೋದಹಾಗೆ ಮತ್ತಷ್ಟು ಅವಸರವಾಗಿ ಹೆಜ್ಜೆಗಳನ್ನು ಹಾಕಿದೆವು.

''ಸೂರ್ಯನು ನೆತ್ತಿಗೆ ಏರಿದನು. ಪಾರಿವಾಳಗಳು ನೆರಳಲ್ಲಿ ಕೂಗುತಿದ್ದುವು. ಮಧ್ಯಾಹ್ನದ ಬಿಸಿಯಾದ ಗಾಳಿಯಲ್ಲಿ ಒಣ ಎಲೆಗಳು ನೃತ್ಯ ಮಾಡುತ್ತ ಸುತ್ತಾಡುತ್ತಿದ್ದುವು. ಕುರಿಯನ್ನು ಕಾಯುವ ಹುಡುಗನು ಆಲದ ಮರದ ಕೆಳಗೆ ನಿದ್ರೆಮಾಡುತ್ತ ಸ್ವಪ್ನಕಾಣುತ್ತಿದ್ದನು. ನಾನು ಕಾಲುವೆಯ ಪಕ್ಕದಲ್ಲಿ ಮಲಗಿ ಸೋತಕ್ಕೆ ಕಾಲುಗಳನ್ನು ಚಾಚಿದೆನು. ನನ್ನ ಜೊತೆಯವರು ನನ್ನನ್ನು ಪರಿಹಾಸ್ಯಮಾಡಿ ನಕ್ಕರು; ದೃಢಚಿತ್ತರಾಗಿ ತಲೆಯನೆತ್ತಿಕೊಂಡು ಮುಂದಕ್ಕೆ ನಡೆದರು. ಅವರು ವಿಶ್ರಾಂತಿಯನ್ನು ತೆಗೆದುಕೊಳ್ಳಲೂ ಇಲ್ಲ; ಹಿಂದಿರುಗಿ ನೋಡಲೂ ಇಲ್ಲ; ದೂರದ ನೀಲಿಯ ಮಂಜಿನಲ್ಲಿ ಮರೆಯಾದರು. ಅವರು ಅನೇಕ ಮೈದಾನಗಳನ್ನೂ ಗುಡ್ಡಗಳನ್ನೂ ದಾಟಿ ಹೊಸ ಹೊಸ ದೂರದೇಶಗಳಲ್ಲಿ ನಡೆದರು. ಕೊನೆಯಿಲ್ಲದಪಥದ ಧೀರ ಪಥಿಕರೆ! ನಿಮ್ಮನ್ನು ಎಷ್ಟು ಶ್ಲಾಘಿಸಿದರೂ ತೀರದು. ಅವರ ಹಾಸ್ಯವೂ ಸಣ್ಣ ಮಾತೂ ನನ್ನನ್ನು ಏಳುವುದಕ್ಕೆ ಪ್ರೇರಿಸಿದುವು. ಆದರೆ ಪ್ರೇರಣೆಯು ಸಫಲವಾಗಲಿಲ್ಲ. ಪರಾಜಿತನಾದರೂ ಒಂದು ಸಂತೋಷದಲ್ಲಿ, ಒಂದು ಅಸ್ಫುಟವಾದ ಆನಂದದ ನೆರಳಲ್ಲಿ, ನಾನು ಮುಳುಗಿಹೋದೆನು.

''ಸೂರ್ಯನ ಪ್ರಭೆಯಿಂದ ಚಿತ್ರಿತವಾದ ಹಸುರು ಗಿಡದ ನೆರಳಿನ ಶಾಂತಿಯು ನನ್ನ ಹೃದಯವನ್ನು ಆವರಿಸಿತು. ನಾನು ಯಾವುದಕ್ಕಾಗಿ ಹೊರಟಿದ್ದೆನೆಂಬುದು ನನಗೆ ಮರೆಯಿತು. ಅಲ್ಲಿಯ ನೆರಳಿನ ಅಲ್ಲಿನ ಹಾಡಿನ ಮಾಯಕ್ಕೆ ನನ್ನ ಮನಸ್ಸನ್ನು ತೆತ್ತೆನು.

''ಕೊನೆಗೆ ನಿದ್ರೆಯಿಂದ ಎಚ್ಚತ್ತು ಕಣ್ಣು ತೆರೆದಾಗ ನೀನು ನನ್ನ ಪಕ್ಕದಲ್ಲಿ ನಿಂತಿದ್ದೆ. ನನ್ನ ನಿದ್ರೆಯನ್ನು ನಿನ್ನ ಹಾಸದಿಂದ ತೇಲಿಸುತ್ತಿದ್ದೆ. ದಾರಿಯು ದೂರವಾದುದೆಂದೂ ಬೇಸರ ಮಾಡುವುದೆಂದೂ ನಿನ್ನನ್ನು ಸೇರುವ ಯತ್ನವು ಕಠಿನವಾದುದೆಂದೂ ನಾನು ಎಷ್ಟು ಭಯಪಟ್ಟಿದ್ದೆನು!''

ಈ ಮರೆಗಿನ ಪದ್ಯಗಳು ಮೂರು ಪಾಲು ಹೃದಯದಲ್ಲಿ ಪರಮಾತ್ಮನನ್ನು ಕಾಣುವ ವಿಷಯವನ್ನು ಕುರಿತುವು. ಯುಗಾಂತರಗಳಿಂದ ಜೀವಾತ್ಮವು ಅರಸುತ್ತ ಬಂದು ಸೋತು ನಿಂತಿರುವಾಗ್ಗೆ ಯುಗಾಂತರಗಳಿಂದ ಪರಮಾತ್ಮನು ನಡೆದು ಬಂದು ಸರ್ವ ವಿಧದಲ್ಲಿಯೂ ಜೀವಾತ್ಮನನ್ನು ತನಗೆ ತಕ್ಕವನನ್ನಾಗಿ ಮಾಡಿಕೊಂಡು ಕಷ್ಟ ನಿಷ್ಠುರದಲ್ಲಿಯೂ

ಸುಖ ಸೌಂದರ್ಯದಲ್ಲಿಯೂ ಸ್ವಲ್ಪ ಸ್ವಲ್ಪವಾಗಿ ಅವನಿಗೆ ತನ್ನ ಪರಿಚಯು ವನ್ನು ಕೊಟ್ಟು ಕೊನೆಗೆ ಅವನಿಗೆ ಕಾಣುವನು. ಪರಮಾತ್ಮನ ದಯೆಯು ನಿರ್ಹೇತುಕವಾದದ್ದು, ಅಥವಾ ಅತ್ಯಲ್ಪ ಹೇತುಕವಾದದ್ದು.—

"ನೀನು ನಿನ್ನ ಗಾದಿಯಿಂದಿಳಿದುಬಂದು ನನ್ನ ಗುಡಿಸಿಲ ಮುಂದೆ ನಿಂತೆ.

"ನಾನು ಒಂದು ಮೂಲೆಯಲ್ಲಿ ಒಂದು ಹಾಡನ್ನು ಹೇಳುತ್ತಿದ್ದೆ. ಆ ಧ್ವನಿಯು ನಿನ್ನ ಕಿವಿಗೆ ಬಿದ್ದಿತು. ಅದನ್ನು ಕೇಳಿ ಬಂದು ಬಾಗಿಲ ಬಳಿ ನಿಂತೆ.

"ನಿನ್ನ ಆಸ್ಥಾನದಲ್ಲಿ ಪಂಡಿತರಿದ್ದಾರೆ. ಅವರು ಅಲ್ಲಿ ಯಾವಾಗಲೂ ಹಾಡುತ್ತಲೇ ಇರುವರು. ಆದರೂ ಸಾಮಾನ್ಯನ ಒಂದು ಸಾಮಾನ್ಯ ಗೀತವು ನಿನ್ನ ಮನಸ್ಸನ್ನು ಆಕರ್ಷಿಸಿತು. ವ್ಯಸ್ತವಾದ ಸುಲಭ ಸ್ವರವೊಂದು ಸೃಷ್ಟಿಯ ಮಹಾ ಗೀತದಲ್ಲಿ ಮಿಶ್ರವಾಯಿತು. ಅದಕ್ಕೆ ಮರ್ಯಾದೆ ಮಾಡುವ ಸಲುವಾಗಿ ಒಂದು ಪುಷ್ಪವನ್ನು ಹಿಡಿದುಕೊಂಡು ನೀನು ಸಿಂಹಪೀಠವನ್ನು ಬಿಟ್ಟು ನನ್ನ ಗುಡಿಸಿಲಿಗೆ ಬಂದೆ."

ಪರಮಾತ್ಮನನ್ನು ಸಂಪೂರ್ಣವಾಗಿ ತಿಳಿಯಬೇಕಾದರೆ ನಮ್ಮನ್ನು ನಾವು ಸಂಪೂರ್ಣವಾಗಿ ಮರೆಯಬೇಕು. ಪರಮಾತ್ಮನಿಂದ ಸಂಪತ್ತನ್ನು ಅಪೇಕ್ಷಿಸುವುದು ಉತ್ತಮ ಸುಖಕ್ಕೆ ಸಾಧನವಲ್ಲ. ಅವನು ಸುಖವನ್ನು ಕೊಡುತ್ತೇನೆಂದು ಬರುವುದಿಲ್ಲ. ನಮ್ಮಿಂದ ತ್ಯಾಗವನ್ನು ಅಪೇಕ್ಷಿಸಿ ಬರುವನು. ನಮ್ಮ ತ್ಯಾಗವು ಎಷ್ಟು ದೊಡ್ಡದಾದರೆ ಅದು ಅಷ್ಟು ಪರಸುಖಕ್ಕೆ ಸಾಧನವಾಗುತ್ತದೆ.—

"ಬಾಗಿಲಿಂದ ಬಾಗಿಲಿಗೆ ಭಿಕ್ಷೆ ಬೇಡುತ್ತ ನಾನು ಹಳ್ಳಿಯ ದಾರಿಯಲ್ಲಿ ಹೋಗುತ್ತಿರುವಲ್ಲಿ ದೂರದಲ್ಲಿ ನಿನ್ನ ಸ್ವರ್ಣರಥವು ವೈಭವ ಸ್ವಪ್ನದಂತೆ ಕಣ್ಣಿಗೆ ಬಿದ್ದಿತು. ಈ ರಾಜಾಧಿರಾಜನಾರೋ ಎಂದು ನಾನು ಕಾತರಪಟ್ಟೆನು.

"ನನ್ನ ಆಸೆಯು ಅಧಿಕವಾಯಿತು. ನನ್ನ ಕಷ್ಟದ ದಿನಗಳು ನೀಗಿದುವು ಎಂದುಕೊಂಡೆನು. ಕೇಳದೆಯೇ ನೀನು ಭಿಕ್ಷೆ ನೀಡು ಯೆಂದೂ ಮಣ್ಣಿನಲ್ಲಿ ಧನವನ್ನು ಎರಚುವೆಯೆಂದೂ ನೆನೆದು ನಾನು ಅಲ್ಲೇ ನಿಂತೆನು.

"ನಾನು ನಿಂತ ಕಡೆ ರಥವು ನಿಂತಿತು. ನಿನ್ನ ದೃಷ್ಟಿಯು ನನ್ನ ಮೇಲೆ ಬಿದ್ದಿತು. ಮುಗುಳು ನಗೆಯಿಂದ ನೀನು ಕೆಳಗಿಳಿದು ಬಂದೆ. ಕೊನೆಗೆ

ನನ್ನ ಜೀವನದ ಸುಕೃತವು ಬಂದಿತೆಂದು ನನಗೆ ತೋರಿತು. ಆಗ ನೀನು ಒಡನೆಯೇ ನನ್ನ ಕಡೆಗೆ ನಿನ್ನ ಬಲಗೈಯನ್ನು ಚಾಚಿ ನನಗೆ ಏನನ್ನು ಕೊಡುವೆ ಎಂದು ಕೇಳಿದೆ.

"ಅಯ್ಯಾ! ಭಿಕ್ಷುಕನಲ್ಲಿ ಭಿಕ್ಷೆ ಬೇಡುವುದಕ್ಕೆ ಕೈನೀಡುವುದು ದೊರೆಗೆ ತಕ್ಕ ಹಾಸ್ಯವೆ? ನನಗೆ ಮಂಕು ಬಡಿದು ಏನೂ ತಿಳಿಯದೆ ನಿಂತೆನು. ಕೊನೆಗೆ ನನ್ನ ಜೋಳಿಗೆಯಿಂದ ಒಂದು ಸಣ್ಣ ಅಕ್ಕಿಯ ಕಾಳನ್ನು ತೆಗೆದು ನಿನ್ನ ಕೈಯಲ್ಲಿಟ್ಟೆನು.

"ಆದರೆ ದಿನದ ಕೊನೆಯಲ್ಲಿ ನನ್ನ ಚೀಲವನ್ನು ಕವುಚಲು ನನ್ನ ಸ್ವಲ್ಪ ಧಾನ್ಯದಲ್ಲಿ ಒಂದು ಸಣ್ಣ ಚಿನ್ನದ ಕಾಳು ಇರುವುದು ಕಂಡಿತು. ನನ್ನ ಆಶ್ಚರ್ಯವನ್ನು ಏನೆಂದು ಹೇಳಲಿ! ನೀನು ಕೇಳಿದಾಗ ನನ್ನ ಸರ್ವಸ್ವವನ್ನೂ ಕೊಟ್ಟುಬಿಟ್ಟಿದ್ದರೆ ಚೆನ್ನಾಗಿತ್ತಲ್ಲಾ ಎಂದು ನಾನು ಬಹಳವಾಗಿ ಅತ್ತೆನು."

ಪರಮಾತ್ಮನನ್ನು ತಿಳಿಯುವುದರಿಂದ ನಾವು ಅವನಿಂದ ಕೇವಲ ಸುಖವನ್ನು ಮಾತ್ರವಲ್ಲದೆ ಕಷ್ಟವನ್ನೂ ಒಪ್ಪಿ ತೆಗೆದುಕೊಳ್ಳುವೆವು. ರಾಜನ ಪ್ರೇಯಸಿಯು ಅವನಿಂದ ಅನುಗೃಹೀತಳಾಗಿ ಉದಯದಲ್ಲಿ ಅವನ ಜ್ಞಾಪಕವಾಗಿ ಏನಿರುವುದೋ ಎಂದು ನೋಡುವಲ್ಲಿ ಅವನ ಕತ್ತಿ ಮಾತ್ರ ಇದ್ದಿತೆಂದು ಕವಿಯು ವರ್ಣಿಸಿದ್ದಾನೆ. ರಾಜನು ಧರಿಸಿದ್ದ ಪುಷ್ಪಮಾಲೆಯನ್ನು ಅವಳು ಕೇಳಬೇಕೆಂದಿದ್ದಳು. ಅವಳಿಗೆ ಸಿಕ್ಕಿದ್ದು ಆ ಕತ್ತಿ. ಎಂದರೆ, ಪರಮಾತ್ಮನ ಜ್ಞಾನದಿಂದ ಅವನಿಗೆ ತಕ್ಕಂತೆ ನಡೆಯುವುದು ಅವಶ್ಯಕವಾಗುವುದು. ಹಾಗೆ ನಡೆಯಬೇಕಾದರೆ ಸುಖಗಳನ್ನೂ ಇಷ್ಟ ವಸ್ತುಗಳನ್ನೂ ತ್ಯಜಿಸಬೇಕಾಗುವುದು. ಭಕ್ತನು ಇದಕ್ಕೂ ಒಪ್ಪುವನು.—

"ನನ್ನೊಡೆಯ! ನೀನು ನನ್ನ ತೊಡವಿಗಾಗಿ ನಿನ್ನ ಕತ್ತಿಯನ್ನು ಕೊಟ್ಟಿದ್ದೀಯೆ. ನನಗಿನ್ನು ಸಣ್ಣ ಪುಟ್ಟ ಗೊಂಬೆಯ ತೊಡವುಗಳು ಬೇಕಿಲ್ಲ.

"ನಕ್ಷತ್ರಗಳಿಂದ ಚಿತ್ರಿಸಿ ಕೋಟ್ಯಂತರ ರತ್ನಗಳಿಂದ ಕೆತ್ತಿರುವ ನಿನ್ನ ಕೈಕಡಗವು ಬಹು ಅಂದವಾಗಿದೆ. ಆದರೂ ಸಂಧ್ಯಾರಾಗದಲ್ಲಿ ನಿಶ್ಚಲವಾಗಿ ತೇಲುತ್ತಿರುವ ಗರುಡಪಕ್ಷಿಯ ಹರಡಿದ ರೆಕ್ಕೆಯಂತೆ ಇರುವ ಭಾಸುರವಾದ ನಿನ್ನ ಕತ್ತಿಯು ಆ ಕಡಗಕ್ಕಿಂತಲೂ ಅಂದವಾಗಿದೆ."

(ಸತ್ಕಾರ್ಯವನ್ನು ಮಾಡಿ ಅದಕ್ಕೆ ಪ್ರತಿಯಾಗಿ ಏನನ್ನೂ ನಿರೀಕ್ಷಿಸದಿರುವುದು ಪರಮಾತ್ಮನ ತಿಳಿವಿನಿಂದ ಬರುವ ಒಂದು ಗುಣ. ಕ್ಷಣವಾದರೂ ಸೋಮಾರಿಯಾಗಿರದೆ ಪ್ರಪಂಚದ ಗತಿಗೆ ಅನುಸಾರವಾಗಿ ಒಳ್ಳೆಯದನ್ನು ಸಾಧಿಸುವುದಕ್ಕೆ ಪ್ರಯತ್ನಪಡುವುದು ಇನ್ನೊಂದು.) ಸೃಷ್ಟಿಯ ಆನಂದವನ್ನು ಸ್ಪಷ್ಟವಾಗಿ ಕಾಣುವುದು ಇದರಿಂದ ಬರುವ ಹೊಸ ದೃಷ್ಟಿಶಕ್ತಿ. ಈ ಆನಂದದಲ್ಲಿ ಬರಿಯ ಸುಖವೆನ್ನುವುದು ಮಾತ್ರವಲ್ಲದೆ, ಸಂಪಾದನೆ ಎನ್ನುವುದು ಮಾತ್ರವಲ್ಲದೆ ಕಷ್ಟವೂ ಬೇನೆಯೂ ತ್ಯಾಗವೂ ಸೇರಿರುವುದು ತಿಳಿಯುವುದು.—

"ನನ್ನ ಕೊನೆಯ ಹಾಡಿನಲ್ಲಿ ಎಲ್ಲ ಆನಂದವೂ ಸೇರಲಿ. ಭೂಮಿಯನ್ನು ಸುಮ್ಮನೆ ಹುಲ್ಲು ಬೆಳೆಯುವುದರಲ್ಲಿ ಪ್ರೇರಿಸುವ ಆನಂದ, ಹುಟ್ಟು ಅಳಿವೆಂಬ ಯಮಳರನ್ನು ಜೀವನದಲ್ಲಿ ನಲಿಯಲು ಬಿಟ್ಟಿರುವ ಆನಂದ, ಬಿರುಗಾಳಿಯೊಡನೆ ಬೀಸಿಕೊಂಡು ಬಂದು ಜೀವನವನ್ನೆಲ್ಲ ಕದಲಿಸಿ ಅದಲಿಸಿ ನಗಿಸುವ ಆನಂದ, ನೋವಿನ ಕೆಂದಾವರೆಯ ದಳದಲ್ಲಿ ಕಣ್ಣೀರೊಡನೆ ನೆಲಸಿರುವ ಆನಂದ, ತನ್ನ ಸರ್ವಸ್ವವನ್ನೂ ನೆಲದ ಮೇಲೆಸೆದು ಅತೃಪ್ತಿಯ ಒಂದು ಮಾತನ್ನೂ ಆಡದಿರುವ ಆನಂದ—ಈ ಎಲ್ಲ ಆನಂದದ ಕೃತಿಗಳೂ ನನ್ನ ಕೊನೆಯ ಹಾಡಿನಲ್ಲಿ ಸೇರಲಿ."

ಪ್ರಪಂಚದ ಸೌಂದರ್ಯವೆಲ್ಲವೂ ಪರಮಾತ್ಮನು ನಮ್ಮ ಮನಸ್ಸನ್ನು ಆಕರ್ಷಿಸುವುದಕ್ಕಾಗಿ ಮಾಡಿರುವ ಸಾಧನವೆಂದು ಜ್ಞಾನಿಗೆ ತಿಳಿಯುವುದು. ಹಸುರೆಲೆಯ ಮೇಲೆ ನರ್ತಿಸುವ ಹೊಂಬೆಳಗೂ ಆಕಾಶದಲ್ಲಿ ಪ್ರವಹಿಸುವ ಮೋಡಗಳೂ ನಮ್ಮ ಹಣೆಯಮೇಲೆ ತಂಪಾಗಿ ಬೀಸುವ ಗಾಳಿಯೂ ನಮ್ಮ ಕಣ್ಣುಗಳನ್ನು ತುಂಬಿ ಹರಿಯುವ ಉದಯದ ಬೆಳಕೂ ಅವನ ಪ್ರೇಮದ ಚಿಹ್ನೆಗಳು. ತಂದೆಯು ಮಗುವಿಗೆ ಆಟದ ಸಾಮಾನನ್ನು ತರುವಂತೆ ಪರಮಾತ್ಮನು ಇವುಗಳನ್ನು ನಮಗಾಗಿ ಕೊಟ್ಟಿರುವನು.—

"ಮಗು! ನಿನಗೆ ಬಣ್ಣ ಬಣ್ಣದ ಆಟದ ಸಾಮಾನುಗಳನ್ನು ನಾನು ತಂದಾಗ ಮೋಡಗಳ ಮೇಲೆ ನೀರಿನ ಮೇಲೆ ಅಷ್ಟೊಂದು ಬಣ್ಣಗಳು ಆಡುವುದೇಕೆಂದೂ ಪುಷ್ಪಗಳು ಹಲವು ಬಣ್ಣವಾಗಿರುವುದೇಕೆಂದೂ ನನಗೆ ತಿಳಿಯುತ್ತದೆ. ನಿನ್ನನ್ನು ಸಂತೋಷಗೊಳಿಸುವುದಕ್ಕೆ ನಿನಗೆ ಮುತ್ತು

ಕೊಟ್ಟಾಗ ಪ್ರಾತಃಕಾಲದ ಬೆಳಕಿನಲ್ಲಿ ಆಕಾಶದಿಂದ ಹರಿದು ಬರುವ ಸುಖವೂ ಬೇಸಗೆಯ ತಂಗಾಳಿಯು ನನ್ನ ದೇಹಕ್ಕೆ ತರುವ ಆನಂದವೂ ಯಾವುವೆಂದು ನನಗೆ ತಿಳಿಯುತ್ತದೆ.''

ಪರವಸ್ತುವಿನ ಜ್ಞಾನದಿಂದ ಜೀವನರೆಲ್ಲರೂ ನಮಗೆ ಇಷ್ಟರಾಗುವರು.—

"ನನಗೆ ತಿಳಿಯದೆ ಇದ್ದ ಸ್ನೇಹಿತರಿಗೆಲ್ಲ ನೀನು ನನ್ನನ್ನು ತಿಳಿಯುವಂತೆ ಮಾಡಿದೆ. ನನಗೆ ಸೇರದ ಮನೆಗಳಲ್ಲಿ ನನಗೆ ಸ್ಥಳವನ್ನು ಕೊಡಿಸಿದೆ. ದೂರವಾದದ್ದನ್ನು ಹತ್ತಿರ ತಂದು ಅಪರಿಚಿತನನ್ನು ಒಡಹುಟ್ಟಿದವನನ್ನಾಗಿ ಮಾಡಿದೆ. ನನ್ನ ವಾಡಿಕೆಯಾದ ಸ್ಥಳವನ್ನು ಬಿಡಬೇಕಾದರೆ ಮನಸ್ಸು ಶಂಕಿಸುತ್ತದೆ. ನವೀನದಲ್ಲಿಯೂ ಪ್ರಾಚೀನವಿರುವುದೆಂಬುದನ್ನೂ ಅವೆರಡರಲ್ಲೂ ನೀನಿರುವೆಯೆಂಬುದನ್ನೂ ನಾನು ಮರೆತಿರುವೆನು. ಹುಟ್ಟಿನಲ್ಲೂ ಸಾವಿನಲ್ಲೂ ಈ ಲೋಕದಲ್ಲೂ ಇತರ ಲೋಕಗಳಲ್ಲೂ ನೀನು ಎಲ್ಲಿ ಕರೆದುಕೊಂಡು ಹೋದರೆ ಅಲ್ಲಿ ಎಲ್ಲವೂ ಯಾವಾಗಲೂ ಒಬ್ಬನೇ ಆದ ನೀನೇ ನನ್ನ ಅನಂತ ಜೀವನದ ಒಬ್ಬ ಒಡನಾಡಿಯಾಗಿ ನನ್ನ ಹೃದಯವನ್ನು ಅಪರಿಚಿತಕ್ಕೆಲ್ಲ ಆನಂದ ಬಂಧನದಿಂದ ಬಂಧಿಸುತ್ತಿರುವೆ.

"ನಿನ್ನನ್ನು ಅರಿತ ಮೇಲೆ ಅಪರಿಚಿತರಿಲ್ಲ. ಆಗ ಯಾವ ಬಾಗಿಲೂ ಮುಚ್ಚಿರುವುದಿಲ್ಲ.''

ಈ ಜ್ಞಾನದಿಂದ ಜೀವಾತ್ಮದ ಅವತಾರದ ಉದ್ದೇಶವು ತಿಳಿದು ಬರುವುದು. ಪರಮಾತ್ಮನು ತನ್ನ ಆದ್ಯಂತ ರಹಿತವಾದ ಆನಂದದ ಶ್ರುತಿಯನ್ನು ಕೇಳಬೇಕೆನ್ನುವುದಕ್ಕಾಗಿ ಜೀವಾತ್ಮನನ್ನು ಮಾಡಿ ಅವನಿಂದ ಹಾಡುಗಳನ್ನು ಹಾಡಿಸಿ ಕೇಳುವನು. ಕವಿಗೆ ಅವನು ವಿಷಯವನ್ನು ಕೊಡುವನು. ಅದನ್ನು ನುಡಿಯುವುದಕ್ಕೆ ಬೇಕಾದ ಆನಂದವನ್ನು ಕೊಟ್ಟು ಅದರ ಮೂಲಕ ಗಾನವನ್ನು ಕೊಡುವನು. ತನ್ನ ಗುಣಗಳಲ್ಲಿ ಒಂದು ಅಂಶವನ್ನು ಕವಿಗೆ ಕೊಟ್ಟು ಆ ಮೂಲಕ ಆ ಅಂಶವನ್ನು ತಾನು ಅನುಭವಿಸುವನು. ಪರಮಾತ್ಮನು ಸೂರ್ಯನಂತೆ ತೇಜೋಮಯನು. ನಾವು ಸೂರ್ಯನಿಂದ ಆಕರ್ಷಿಸಲ್ಪಟ್ಟ ಮೋಡಗಳಂತೆ ಹಲವು ಬಣ್ಣಗಳಿಂದ ಕೂಡಿರುವೆವು. ಸೂರ್ಯನು ಬಣ್ಣ ಬಣ್ಣದ ಮೋಡಗಳಿಂದ ತನ್ನ ಪ್ರಭೆಯನ್ನು ಆಚ್ಛಾದಿಸಿಕೊಳ್ಳುವಂತೆ ಪರಮಾತ್ಮನು ದುಃಖದಿಂದಲೂ ಸುಖದಿಂದಲೂ ಕೂಡಿ ಕಸಿಕರವನ್ನುಂಟು

ಮಾಡುವ ವಿವಿಧ ಜೀವನದ ಜೀವಾತ್ಮರನ್ನು ತನ್ನ ಸುತ್ತ ಸೆಳೆದು ಕೊಂಡಿರುವನು.

ನಾವು ಬೇರೆ ಒಂದು ಸೃಷ್ಟಿಯಲ್ಲವೆಂದೂ ನಮ್ಮ ಸುತ್ತಣ ಪ್ರಪಂಚದ ಜೀವಕಳೆಯೂ ನಮ್ಮಲ್ಲಿರುವ ಜೀವಕಳೆಯೂ ಒಂದೇ ಎಂದೂ ಪರವವಸ್ತುವಿನ ಜ್ಞಾನದಿಂದ ತಿಳಿಯುವುದು. ಇದು ತಿಳಿದಿದ್ದರೆ ಒಂದು ಕ್ಷಣವಾದರೂ ನಿಲ್ಲದೆ ರಭಸದಿಂದ ಮುಂದಕ್ಕೆ ನಡೆಯುತ್ತಿರುವ ಸೃಷ್ಟಿಯ ಗತಿಗೆ ಅನುಸಾರವಾಗಿ ನಾವು ನಡೆಯುತ್ತೇವೆ.

ಜೀವಾತ್ಮವು ಪರಮಾತ್ಮದ ಒಂದು ಅಂಶ ಮಾತ್ರ ಎಂದು ಕವಿಯು ಹೀಗೆ ವರ್ಣಿಸಿದ್ದಾನೆ:—

"ನಾನು ವಿಶೇಷ ಅಭಿಮಾನದಿಂದ ನಡೆದುಕೊಂಡು, ನನ್ನನ್ನು ನಾನೆ ನೋಡಿಕೊಳ್ಳುತ್ತ ನಿನ್ನ ಪ್ರಭೆಯಲ್ಲಿ ವರ್ಣ ವರ್ಣದ ಮೋಡವಾಗ ಬೇಕೆನ್ನುವ ಇದು ನಿನ್ನ ಮಾಯೆ.

"ನಿನ್ನೊಳಗೆ ಒಂದು ಭಾಗವನ್ನು ಬೇರೆ ಮಾಡಿ ಆ ಬೇರೆಯಾದ ಭಾಗವನ್ನು ನೂರಾರು ರೀತಿಯಿಂದ ಕರೆಯುತ್ತೀಯೆ. ಈ ಬೇರೆಯಾದ ಭಾಗವು ನನ್ನಲ್ಲಿ ಆಕಾರವನ್ನು ಪಡೆದಿದೆ."

ಪರಮಾತ್ಮನು ತನ್ನ ಇಷ್ಟಪೂರ್ವಕವಾಗಿ ನಮ್ಮನ್ನು ಸೃಷ್ಟಿಸಿ ನಮ್ಮ ರಕ್ಷಣೆಯ ಭಾರವನ್ನು ತಳೆದಿರುವನೆಂದು ತಿಳಿದರೆ ನಾವು ಪ್ರಪಂಚವನ್ನು ತ್ಯಜಿಸಬೇಕೆಂಬ ಹುಚ್ಚನ್ನು ಬಿಡುವೆವು; ಜ್ಞಾನ ಕರ್ಮ ಸಂಬಂಧದ ಇಂದ್ರಿಯಗಳನ್ನು ಸರಿಯಾಗಿ ಉಪಯೋಗಿಸುವೆವು; ಅವು ಎಲ್ಲಿಗೋ ಸೆಳೆಯುವುವೆಂದು ಅವುಗಳನ್ನು ನಿರಾಕರಿಸುವುದಿಲ್ಲ.—

"ನನ್ನ ಮುಕ್ತಿಯು ತ್ಯಾಗದಿಂದ ಬರುವುದಿಲ್ಲ. ನೂರಾರು ಇಷ್ಟ ಬಂಧನಗಳನ್ನು ತಳೆಯುವುದರಲ್ಲಿ ನಾನು ಬಿಡುಗಡೆಯನ್ನು ಅನುಭವಿಸುತ್ತೇನೆ."

ಎಂದರೆ, ಭಗವಂತನ ಸೃಷ್ಟಿಯ ನಿಯಮಗಳು ಯಾವುವೋ ಅವಕ್ಕೆ ಒಳಪಟ್ಟು ನಡೆಯುವುದರಲ್ಲಿ ನಾವು ನಿಜವಾದ ಬಿಡುಗಡೆಯನ್ನು ಅನುಭವಿಸುತ್ತೇವೆ.—

"ನಾನು ನನ್ನ ಇಂದ್ರಿಯಗಳನ್ನು ನಿರೋಧಿಸುವುದಿಲ್ಲ. ನೋಡುವುದೂ ಕೇಳುವುದೂ ಸ್ಪರ್ಶಮಾಡುವುದೂ ಇವೆಲ್ಲದರ ಸುಖವೂ ನಿನ್ನ

ಸುಖವೇ ; ಇದಕ್ಕೆ ಸಂದೇಹವಿಲ್ಲ. ನನ್ನ ಅಜ್ಞಾನವೆಲ್ಲವೂ ಅನಂತ ಜ್ಯೋತಿಯಾಗಿ ಉರಿಯುವುದು. ನನ್ನ ಆಸೆಯೆಲ್ಲವೂ ಪ್ರೇಮ ಫಲಗಳಾಗಿ ಪಕ್ವವಾಗುವುದು.''

ಬಂಧನದಲ್ಲಿ ಮುಕ್ತಿಯೆನ್ನುವುದಕ್ಕೆ ಇನ್ನೂ ಅರ್ಥ ಉಂಟು. ದೇವರು ನಮ್ಮನ್ನು ಕಟ್ಟಿಕೊಂಡು ಇರುವಂತೆ ನಾವೂ ಅವನನ್ನು ಸ್ವೀಕರಿಸಬೇಕು. ಅವನು ಬೇರೆಯಲ್ಲ; ಸೃಷ್ಟಿಯೇ ಅವನ ವ್ಯಕ್ತ ಸ್ವರೂಪವು; ಮನುಷ್ಯರೆಲ್ಲ ಅವನ ಅಂಶವು.—

"ನಿನ್ನನ್ನು ನನ್ನ ದೇವರೆಂದು ಬಲ್ಲೆನು. ಇದನ್ನು ತಿಳಿದು ಒಂದು ಕಡೆ ನಿಲ್ಲುತ್ತೇನೆ. ನೀನು ನನ್ನ ಸ್ವವಸ್ತುವೆಂದು ತಿಳಿದು ನಿನ್ನನ್ನು ಸೇರುವುದಿಲ್ಲ. ನಿನ್ನನ್ನು ತಂದೆಯೆಂದು ತಿಳಿದು ನಿನಗೆ ನಮಸ್ಕಾರ ಮಾಡುತ್ತೇನೆ. ನನ್ನ ಸ್ನೇಹಿತನಂತೆ ನಿನ್ನ ಕೈಯನ್ನು ಹಿಡಿಯುವುದಿಲ್ಲ. ನೀನು ನಿನ್ನ ಔನ್ನತ್ಯವನ್ನು ಬಿಟ್ಟು ನನ್ನವನಾಗಿ ಬಂದು ನಿಂತಾಗ ನಿನ್ನನ್ನು ಅಪ್ಪಿಕೊಂಡು ಒಡನಾಡಿಯೆಂದು ಕಾಣುವುದಿಲ್ಲ. ನೀನು ನನ್ನ ಒಡಹುಟ್ಟುಗಳಲ್ಲಿರುವ ಒಡಹುಟ್ಟು. ಆದರೂ ನಾನು ಅವರನ್ನು ಲಕ್ಷ್ಯಮಾಡುವುದಿಲ್ಲ; ನನ್ನ ಸಂಪಾದನೆಯನ್ನು ಅವರೊಂದಿಗೆ ಅನುಭವಿಸುವುದಿಲ್ಲ. ಹಾಗೆ ಮಾಡದೆ ಇರುವುದರಿಂದ ನನ್ನ ಎಲ್ಲವನ್ನೂ ನಿನ್ನ ಕೂಡ ಅನುಭವಿಸುವುದು ಇಲ್ಲವಾಯಿತು. ಕಷ್ಟ ನಿಷ್ಠುರದಲ್ಲಿ ಮನುಷ್ಯರಿಗೆ ಜೊತೆಯಾಗಿ ನಿಲ್ಲದಿರುವುದರಿಂದ ನಿನಗೆ ನೆರವಾಗದೆ ಹೋಗಿದ್ದೇನೆ. ನನ್ನ ಅಲ್ಪ ಜೀವನವನ್ನು ಬಿಡುವುದಕ್ಕೆ ಹಿಂಜರಿದು ಜಗಜ್ಜೀವನದಲ್ಲಿ ಮುಳುಗದೆ ಇದ್ದೇನೆ.''

ಪರಮಾತ್ಮನ ಜ್ಞಾನವು ಬರುವುದಕ್ಕೆ ಮೊದಲು ಮನುಷ್ಯ ಜೀವನವು ನಿರುದ್ದೇಶವಾಗಿ, ಆಕಾಶ ಮಾರ್ಗದಲ್ಲಿ ಅಲೆಯುವ ಮೋಡದಂತೆ ಇರುವುದು. ಸೂರ್ಯ ರಶ್ಮಿಯು ಮೋಡವನ್ನು ಕರಗಿಸಿ ತನ್ನ ಬೆಳಕಿನಲ್ಲಿ ತುಂಬುವಂತೆ ಪರಮಾತ್ಮನು ಮನುಷ್ಯನನ್ನು ತನ್ನ ಸ್ಪರ್ಶದಿಂದ ಪಾವನಮಾಡುವನು. ಅಂದಿಗೆ ಜನ್ಮವು ಸಾರ್ಥಕ. ಇದಾಗುವವರೆಗೂ ಜೀವನದ ಕಾರ್ಯವು ಸಂಪೂರ್ಣವಲ್ಲ. ಈ ಸ್ಪರ್ಶವು ಹೇಗೆ ಬರುವುದೋ ಹೇಳಲಾಗುವುದಿಲ್ಲ. ಬರಲಿಲ್ಲವೆಂದು ನಾವು ಖೇದಪಡುತ್ತಿರುವಾಗ ಅದಕ್ಕೆ ಆವಶ್ಯಕವಾದ ಸನ್ನಾಹವನ್ನೆಲ್ಲ ಪರಮಾತ್ಮನು ಮಾಡುತ್ತಿರಬಹುದು.—

"ನಾನು ಸೋತು ನಿಶ್ಚೇಷ್ಟನಾಗಿ ಹಾಸಿಗೆಯಲ್ಲಿ ನಿದ್ರಿಸುತ್ತ ಕೆಲಸವೇನೂ ನಡೆಯುತ್ತಿಲ್ಲವೆಂದು ಎಣಿಸಿಕೊಂಡಿದ್ದೆನು. ಬೆಳಿಗ್ಗೆ ಎದ್ದು ನೋಡಿದರೆ ತೋಟದ ತುಂಬ ಚಿತ್ರವಿಚಿತ್ರವಾದ ಪುಷ್ಪಗಳು ತುಂಬಿದ್ದುವು."

ಅಲ್ಲದೆ ನಮ್ಮನ್ನು ತನಗೆ ತಕ್ಕವನನ್ನಾಗಿ ಮಾಡಿಕೊಳ್ಳುವುದಕ್ಕೆ ಪರಮಾತ್ಮನಿಗೆ ಆತುರವೇನೂ ಇಲ್ಲ. ಯುಗಾಂತರಗಳೆಲ್ಲ ಅವನ ಆಳಿಕೆಯಲ್ಲಿವೆ. ಅವನ ಕೈಯಲ್ಲಿ ಕಾಲವು ಅನಂತ. ನಮಗೆ ಆಯುಸ್ಸು ಮಿತವಾದುದರಿಂದ ಅದರಲ್ಲಿ ಕ್ಷಣವನ್ನಾದರೂ ಕಳೆದರೆ ನಮಗೆ ಕಷ್ಟ. ಕಾಲಚಕ್ರವನ್ನೇ ಕೈಯಲ್ಲಿ ಉಳ್ಳವನಿಗೆ ಸಾವಕಾಶವೆನ್ನುವುದೇನು? 'ಪರಮಾತ್ಮನು ಒಂದು ಹೂವನ್ನು ನಯಮಾಡುವುದರಲ್ಲಿ ನೂರಾರು ವರುಷಗಳನ್ನು ಕಳೆಯುತ್ತಾನೆ.' ಸಾವಕಾಶವಾದೀತೆಂದು, ಕಾಲ ಮಿಾರೀತೆಂದು ಅಲ್ಪಾಯುಷ್ಯರಾದ ನಾವು ಹೆದರುವುದು ನಿಜವಾದರೂ ನಾವು ಯಾವಾಗ ಹೋದರೂ ದೇವರು ನಮಗೆ ಕಾದಿರುವನು. ಹೊತ್ತಾದೀತೆಂಬ ಹೆದರಿಕೆ ನಮಗೆ ಉಂಟೇ ಹೊರತು ಹೊತ್ತಾಯಿತೆನ್ನುವುದು ಅವನಿಗಿಲ್ಲ.

ಜೀವಾತ್ಮನು ಯಾವಾಗ ಬಂದರೂ ಪರಮಾತ್ಮನು ಕಾದಿರುವನಾದರೂ ಈ ಜೀವನದಲ್ಲಿ ಪರಮಾತ್ಮನನ್ನು ಜೀವಾತ್ಮನು ಕಾಣದಿದ್ದರೆ ಜನ್ಮವು ವ್ಯರ್ಥವೇ ಸರಿ. ಈ ಭಾವವನ್ನು ಕವಿಯು ಹೀಗೆ ವರ್ಣಿಸಿದ್ದಾನೆ:—

"ಈ ಜೀವನದಲ್ಲಿ ನಿನ್ನನ್ನು ಕಾಣುವ ಅದೃಷ್ಟ ನನಗಿಲ್ಲದಿದ್ದರೆ ಕಾಣಲಿಲ್ಲವೆಂಬ ದುಃಖವು ನನಗೆ ಸರ್ವದಾ ಇರಲಿ. ಈ ಅಶುಭದ ನೋವು ನಿದ್ರೆಯಲ್ಲೂ ಎಚ್ಚರದಲ್ಲೂ ನಾನು ಮರೆಯದಂತೆ ಇರಲಿ.

"ಈ ಪ್ರಪಂಚದ ಅಂಗಡಿ ಕಟ್ಟೆಯ ಗುಂಪಿನಲ್ಲಿ ದಿನ ಕಳೆದು ಲಾಭದಿಂದ ನನ್ನ ಕೈತುಂಬಿದಾಗಲೂ ನಾನು ಸಂಪಾದಿಸಿರುವುದು ಏನೂ ಇಲ್ಲವೆಂದು ನನಗೆ ತೋರಲಿ. ನಿನ್ನನ್ನು ಕಾಣದ ದುಃಖದ ನೋವು ನಿದ್ರೆಯಲ್ಲಿಯೂ ಎಚ್ಚರದಲ್ಲಿಯೂ ನಾನು ಮರೆಯದಂತಿರಲಿ.

"ದಾರಿಯ ಪಕ್ಕದಲ್ಲಿ ಕುಳಿತು ಸೋತು ಏಳುತ್ತಿರುವಾಗಲೂ ಮಣ್ಣಿನಲ್ಲಿ ಹಾಸಿಗೆಯನ್ನು ಹಾಸಿ ಮಲಗಿದಾಗಲೂ ಇನ್ನೂ ನನ್ನ ಪ್ರಯಾಣವು ಮುಗಿಯಲಿಲ್ಲವೆಂಬುದು ನನಗೆ ಜ್ಞಾಪಕವಿರಲಿ. ನಿನ್ನನ್ನು

ನೋಡದ ದುಃಖದ ಬೇನೆಯು ನಾನು ನಿದ್ರೆಯಲ್ಲೂ ಎಚ್ಚರದಲ್ಲೂ ಮರೆಯುದಂತಿರಲಿ.

"ನನ್ನ ಮನೆಯು ಶೃಂಗಾರವಾಗಿ ಅದರಲ್ಲಿ ವೇಣುನಾದವಾಗುತ್ತ ಸಂತೋಷವು ಹೆಚ್ಚಿರುವಾಗಲೂ ನಿನ್ನನ್ನು ಕರೆದಿಲ್ಲವೆಂಬ ವಿಷಯವು ನನಗೆ ಜ್ಞಾಪಕವಿರಲಿ. ನಿನ್ನನ್ನು ಕಾಣದ ದುಃಖದ ನೋವು ನನ್ನ ನಿದ್ರೆಯಲ್ಲಾಗಲಿ ಎಚ್ಚರದಲ್ಲಾಗಲಿ ನಾನು ಮರೆಯುದಂತಿರಲಿ."

ನೋವು ಎನ್ನುವುದಕ್ಕೂ ನಮ್ಮ ಜೀವನದಲ್ಲಿ ಒಂದು ಕಾರ್ಯವಿರುವುದು. ನೋವುಗಳಲ್ಲಿ ದೊಡ್ಡ ನೋವು ಇಷ್ಟರ ಮರಣದಿಂದ ಉಂಟಾಗುವುದು. ಕವಿಯು ಮರಣವೂ ಜೀವನವೂ ಅವಳಿ ಜವಳಿಯೆಂದು ಹೇಳಿದ್ದಾನೆ. ಇಷ್ಟರ ಸಾವಿನಿಂದ ನೋವು ಉಂಟಾಗುವುದಾದರೂ ಜ್ಞಾನಿಯು ಅದರಿಂದ ಉತ್ಸಾಹ ಭಂಗವನ್ನು ಪಡೆಯದೆ ಅದನ್ನು ಸಾವಧಾನದಿಂದ ತಡೆದುಕೊಳ್ಳುವನು; ಆ ನೋವನ್ನು ಪರಮಾತ್ಮನಲ್ಲೇ ಅರ್ಪಣಮಾಡುವನು.—

"ಧನವೂ ಯಶಸ್ಸೂ ನಿನ್ನಿಂದ ಬರುವುವು. ಅದನ್ನು ಕೊಡುವುದೂ ಬಿಡುವುದೂ ನಿನ್ನ ಇಷ್ಟ. ಈ ವ್ಯಸನವಾದರೋ ನನ್ನ ಸ್ವಂತದ್ದು.

ಎಂದರೆ, ಇನ್ನು ಯಾವುದು ನಮಗೆ ನಿಜವಾಗಿ ಅನುಭವಕ್ಕೆ ಬಂದರೂ ಬಾರದಿದ್ದರೂ ನೋವು ಮಾತ್ರ ನಾವು ಅನುಭವಿಸಿದ್ದೇವೆ.—

"ಅದನ್ನು ನಿನಗೆ ಅರ್ಪಿಸಿದಾಗ ನೀನು ಅದಕ್ಕೆ ಬದಲಾಗಿ ನಿನ್ನ ಕರುಣೆಯನ್ನು ದಯಪಾಲಿಸುವೆ."

ನಾವು ಮರಣವೆಂದು ಕರೆಯುವ ಅಗಲಿಕೆಯು ಪರಮಾತ್ಮನಿಂದ ನಾವು ಅಗಲಿರುವುದರ ಒಂದು ಛಾಯೆ ಮಾತ್ರ. ಇದರಂತೆಯೇ ಅದೂ ಭಗವಂತನ ಸೃಷ್ಟಿಯಲ್ಲಿ ಸೇರಿರತಕ್ಕದ್ದು. ಗೀತಾಂಜಲಿಯಲ್ಲಿ ಕವಿಯು ತನ್ನ ಹೆಂಡತಿ ಮಕ್ಕಳು ತೀರಿಹೋದ ಸಂದರ್ಭದಲ್ಲಿ ಬರೆದ ಕೆಲವು ಪದ್ಯಗಳನ್ನು ಸೇರಿಸಿದ್ದಾನೆ.—

"ನಿನ್ನ ಸೇವಕನಾದ ಮೃತ್ಯು ನನ್ನ ಮನೆಯ ಮುಂದೆ ಬಂದಿದ್ದಾನೆ. ಅವನು ಅಜ್ಞಾತ ಸಾಗರವನ್ನು ದಾಟಿ ಬಂದು ನಿನ್ನ ಆಜ್ಞೆಯನ್ನು ನನ್ನ ಮನೆಗೆ ತಂದಿದ್ದಾನೆ. ರಾತ್ರಿ ಕಪ್ಪಗಿದೆ. ನನ್ನ ಹೃದಯವು ಭಯ

ಪಟ್ಟಿದೆ. ಆದರೂ ದೀಪವನ್ನು ತೆಗೆದುಕೊಂಡು ಬಾಗಿಲನ್ನು ತೆಗೆದು ದಯಮಾಡಿಸಬೇಕೆಂದು ಅವನಿಗೆ ನಮಸ್ಕಾರ ಮಾಡುತ್ತೇನೆ. ಏಕೆಂದರೆ ನನ್ನ ಮನೆಯ ಮುಂದೆ ಬಂದಿರುವವನು ನಿನ್ನ ಸೇವಕನು.

"ಕೈಗಳನ್ನು ಕಟ್ಟಿಕೊಂಡು ಕಣ್ಣೀರು ಸುರಿಸಿ ಅವನಿಗೆ ಪೂಜೆ 86
ಯನ್ನು ಮಾಡುವೆನು. ನನ್ನ ಹೃದಯದ ಐಶ್ವರ್ಯವನ್ನು ಅವನ ಅಡಿಯಲ್ಲಿಟ್ಟು ಅವನನ್ನು ಉಪಚರಿಸುವೆನು. ಅವನು ಬಂದ ಕೆಲಸವನ್ನು ಮುಗಿಸಿಕೊಂಡು ನನ್ನ ಉದಯಕ್ಕೆ ಕತ್ತಲನ್ನು ಬಿಟ್ಟು ಹೋಗುವನು. ದಿಕ್ಕು ತಪ್ಪಿದ ನನ್ನ ಮನೆಯಲ್ಲಿ ದಿಕ್ಕಿಲ್ಲದ ನಾನು ಮಾತ್ರ ನಿನಗೆ ಅಂತ್ಯದ ಅಂಜಲಿಯಾಗಿ ನಿಂತಿರುವೆನು."

* * * * * *

"ಇದ್ದರೂ ಇರುವಳೋ ಎಂದು ನನ್ನ ಕೊಠಡಿಯ ನಾಲ್ಕು ಕಡೆಯಲ್ಲೂ ಅವಳನ್ನು ಹುಡುಕಿಸಿ ನೋಡುತ್ತೇನೆ. ಅವಳು ಇಲ್ಲ.

"ಯಾವ ಸಾಗರದಲ್ಲಿ ಒಂದು ಆಸೆಯಾಗಲಿ ಒಂದು ಸುಖವಾಗಲಿ
ಕಣ್ಣೀರ ನಡುವೆ ಕಂಡ ಒಂದು ಮುಖವಾಗಲಿ ಯಾವುದೂ ನಷ್ಟವಾಗುವು 87
ದಿಲ್ಲವೋ ಅಂತಹ ಅನಂತಕಾಲ ಸಾಗರದ ತೀರವನ್ನು ನಾನು ಸೇರಿದ್ದೇನೆ. ಈ ಬರಿದಾದ ನನ್ನ ಜೀವನವನ್ನು ಆದರಲ್ಲಿ ಅದ್ದು, ತೀರ ತುಂಬುವಂತೆ ಆಳವಾಗಿ ಅವುಕು, ಕಳೆದು ಹೋದ ಆ ಸುಖದ ಸ್ಪರ್ಶವನ್ನು ಪ್ರಪಂಚದ ಸರ್ವಸ್ವದಲ್ಲಿ ಮತ್ತೆ ಅನುಭವಿಸುವಂತೆ ಮಾಡು."

* * * * * *

"ಹಾಳುಬಿದ್ದ ಗುಡಿಯ ದೇವರೇ! ವೀಣೆಯ ತಂತಿಯು ಕಿತ್ತು ಹೋಗಿ ನಿನ್ನ ಸ್ತವವನ್ನು ನುಡಿಯದೆ ಇದೆ; ಸಂಜೆಯ ಘಂಟಾನಾದವು ನಿನ್ನ ಪೂಜೆಯ ಸಮಯವನ್ನು ತಿಳಿಸುವುದಿಲ್ಲ. ನಿನ್ನ ಸುತ್ತ ಗಾಳಿಯು ನಿಶ್ಚಲವಾಗಿ ನಿಶ್ಶಬ್ದವಾಗಿದೆ.

"ನಿನ್ನ ದಿಕ್ಕಿಲ್ಲದ ಮನೆಯಲ್ಲಿ ದಾರಿ ತಪ್ಪಿ ಸುಳಿದುಬರುವ
88 ವಸಂತದ ಮಾರುತವು ಹೂಗಳ ಸುದ್ದಿಯನ್ನು ತರುತ್ತದೆ. ನಿನ್ನ ಪೂಜೆಗಾದರೋ ಇನ್ನು ಮೇಲೆ ಹೂಗಳ ಮಾತಿಲ್ಲ.

"ನಿನ್ನ ಹಿಂದಿನ ಅರ್ಚಕನು ಅವನಿಗೆ ಇಲ್ಲದೆ ಹೋಗಿರುವ ಅಪೇಕ್ಷೆಗಳ ದೆಸೆಯಿಂದ ಸುಮ್ಮನೆ ಅಲೆಯುತ್ತಾನೆ. ಸಂಜೆಯ ದೂಳಿನ ಮೋಡದಲ್ಲಿ, ಅರ್ಧ ಬೆಳಕು ಅರ್ಧ ಕತ್ತಲು ಸೇರಿರುವ ಸಮಯದಲ್ಲಿ, ಹೃದಯದಲ್ಲಿ ಆಸೆಯು ಕೊರೆಯುತ್ತಿರಲು, ಈ ಹಾಳು ಗುಡಿಗೆ ಹಿಂದಿರುಗಿ ಬರುತ್ತಾನೆ.

"ಎಷ್ಟೋ ಹಬ್ಬ ಹುಣ್ಣಿಮೆಗಳು ನಿನ್ನ ಪಾಡಿಗೆ ಶಬ್ದವಿಲ್ಲದೆ ಬಂದು ಹೋಗುತ್ತವೆ. ಪೂಜೆ ನಡೆಯಬೇಕಾದ ಎಷ್ಟೋ ರಾತ್ರಿಗಳು ದೀಪವೇ ಇಲ್ಲದೆ ಕಳೆದುಹೋಗುತ್ತವೆ.

"ಕುಶಲ ಶಿಲ್ಪದಲ್ಲಿ ಕುಶಲರಾದವರಿಂದ ಪ್ರತಿಮೆಗಳನೇಕ ಸೃಷ್ಟಿಯಾಗಿ ಮರೆವಿನ ಪ್ರವಾಹದಲ್ಲಿ ಅವುಗಳ ಕಾಲ ಬಂದಾಗ ಕಳೆದುಹೋಗಿವೆ. ಈ ಹಾಳು ಗುಡಿಯ ದೇವರ ಪ್ರತಿಮೆ ಮಾತ್ರ ಅವಜ್ಞತೆಗೆ ಕೊನೆಯೇ ಇಲ್ಲದಂತೆ ಅನರ್ಚಿತವಾಗಿ ನಿಂತೇ ಇದೆ."

ಸಂಸಾರದಲ್ಲಿ ಒಂದು ವಿಧವಾಗಿ ನಡೆಯುತ್ತಿದ್ದ ಜೀವನವು ಪತ್ನೀ ವಿಯೋಗದಿಂದ ಭಿನ್ನವಾಗಲು ಕವಿಯು ಇನ್ನು ಜೀವನದ ಕೆಲಸವೇನೆಂದು ಆಲೋಚಿಸುವನು.—

"ಜನರು ಸಂತೆಗೆ ಹೋಗುತ್ತಿದ್ದಾರೆ. ಮಾರುವರು ಕೊಳ್ಳುವರು ಎಲ್ಲ ಅಲ್ಲಿದ್ದಾರೆ. ನಾನು ಮಾತ್ರ ದಿನದ ಮಧ್ಯದಲ್ಲಿ ಕೆಲಸ ಮುಗಿಯುವ ಮೊದಲು ಕಾಲವಲ್ಲದ ಕಾಲದಲ್ಲಿ ಕೆಲಸದಿಂದ ನಿವೃತ್ತನಾಗಿದ್ದೇನೆ. ಆದದ್ದರಿಂದ ಇದು ಕಾಲವಲ್ಲದಿದ್ದರೂ ನನ್ನ ತೋಟದಲ್ಲಿ ಪುಷ್ಪಗಳು ಬಿಡಲಿ. ಮಧ್ಯಾಹ್ನದ ತುಂಬಿಗಳು ತಮ್ಮ ಝೇಂಕಾರವನ್ನು ಆರಂಭಿಸಲಿ.

"ಒಳ್ಳೆಯದು ಕೆಟ್ಟದರ ಹೊಡೆದಾಟದಲ್ಲಿ ಅನೇಕ ದಿನಗಳನ್ನು ಕಳೆದೆನು. ಈಗ ನನ್ನ ಕೆಲಸವಿಲ್ಲದ ದಿನಗಳ ಒಡನಾಡಿಯು ನನ್ನ ಮನಸ್ಸನ್ನು ತನ್ನಲಿಗೆ ತೆಗೆದುಕೊಂಡಿದ್ದಾನೆ. ಹೀಗೆ ತೆಗೆದುಕೊಂಡಿರುವುದು ಏಕೋ, ಇದರಿಂದ ಇನ್ನು ಯಾವ ನಿಷ್ಫಲ ವ್ಯಾಪಾರವೋ ನನಗೆ ತೋರಲಿಲ್ಲ."

ಎಂದರೆ, ಒಂದು ದಾರಿಯಲ್ಲಿ ಹೋಗುತ್ತಿರುವ ಜೀವನವನ್ನು ಆ ದಾರಿಯಿಂದ ತಪ್ಪಿಸಿದರೆ ಸರಿಯಾದ ಬೇರೊಂದು ದಾರಿಯನ್ನು ತೋರಿಸುವುದು ದೇವರ ಭಾರ. ಆ ದಾರಿಯ ಫಲವು ಒಂದು ಕಾರಣದಿಂದ ಕೈತಪ್ಪಿದರೆ ಇನ್ನೊಂದು ಫಲವು ಅದಕ್ಕೆ ಬದಲಾಗಿ ಬರಬೇಕು. ಈ ಬೇರೆ ಫಲಕ್ಕೆ ಕಾಲ ಸರಿಯಾಗಿಲ್ಲದಿರಬಹುದು. ಆದರೂ ಅದು ಬರುವಂತೆ ದೇವರು ಮಾಡುವನು; ನಮ್ಮ ಜೀವನವು ವ್ಯರ್ಥವಾಗುವುದಿಲ್ಲ.

ಕವಿಯು ಹೀಗೆ ಭರವಸೆಯಲ್ಲಿ ಹೇಳಿದ ಮಾತು ಆತನ ಜೀವನದಲ್ಲಿ ನಿಜವಾಯಿತು. ಇಂತಹ ಸಂದರ್ಭವನ್ನು ಆತನು ಇನ್ನೊಂದು ಪದ್ಯದಲ್ಲಿ ವರ್ಣಿಸಿದ್ದಾನೆ:—

> "ನನ್ನ ಪ್ರಯಾಣವು ಮುಗಿಯಿತೆಂದೂ ನನ್ನ ಶಕ್ತಿಯು ಮುಗಿಯಿತೆಂದೂ ನನ್ನ ದಾರಿ ಪ್ರತಿಬಂಧಿತವಾಗಿ ಸಾಮಗ್ರಿ ಮುಗಿದು ಒಂದು ಮೂಲೆಯಲ್ಲಿ ಸುಮ್ಮನೆ ಕುಳಿತಿರುವ ಸಮಯ ಬಂದಿತೆಂದೂ ನಾನು ಎಣಿಸಿದೆನು. ಆದರೆ ನಿನ್ನ ಇಷ್ಟವು ಅಲ್ಲಿಗೆ ಮುಗಿಯಲಿಲ್ಲವೆಂದು ಕಾಣುತ್ತದೆ. ನಾಲಗೆಯಲ್ಲಿ ಮಾತು ಮುಗಿಯುವ ವೇಳೆಗೆ ಹೃದಯದಲ್ಲಿ ಹೊಸ ಗಾನವು ಹುಟ್ಟುತ್ತಿದೆ. ಹಳೆಯ ದಾರಿ ತಪ್ಪಿಹೋದಾಗ ವಿಚಿತ್ರತರವಾದ ಹೊಸ ಪ್ರಪಂಚವು ಕಾಣುತ್ತಲಿದೆ."

ಇಷ್ಟರ ಮರಣವನ್ನು ಸಾವಧಾನದಿಂದ ತಡೆಯುವಂತೆಯೇ ಜ್ಞಾನಿಯು ತನಗೆ ಬರುವ ಸಾವನ್ನು ಸಮಾಧಾನದಿಂದ ಕಾಯುವನು; ಜೀವನದ ಸಹಜ ಫಲವೆಂಬಂತೆ ಅದನ್ನು ಅಪೇಕ್ಷಿಸಲೂ ಅಪೇಕ್ಷಿಸುವನು.—

> "ಮೃತ್ಯು ಬಂದು ನಿನ್ನ ಮನೆಯ ಬಾಗಿಲನ್ನು ತಟ್ಟುವಾಗ ನೀನು ಅವನಿಗೆ ಏನನ್ನು ಕೊಡುವೆ?
>
> "ನನ್ನ ಜೀವನದ ಪೂರ್ಣ ಪಾತ್ರೆಯನ್ನು ಅವನೆದುರಿಗೆ ಇಡುವೆನು. ಅವನನ್ನು ಬರಿಯ ಕೈಯಲ್ಲಿ ಹೋಗುವುದಕ್ಕೆ ಎಂದಿಗೂ ಬಿಡೆನು."

* * * *

> "ಜೀವನದ ಚರಮ ಸಾಧನವಾದ ಮೃತ್ಯುವೇ! ಬಂದು ನನ್ನ ಕಿವಿಯಲ್ಲಿ ಮಾತನಾಡು. ದಿನದಿಂದ ದಿನಕ್ಕೆ ನಾನು ನಿನಗಾಗಿ ಕಾದಿದ್ದೇನೆ. ನಿನಗಾಗಿ ಕಷ್ಟಗಳನ್ನೂ ಸುಖಗಳನ್ನೂ ಅನುಭವಿಸಿದ್ದೇನೆ.
>
> "ಹೂಗಳನ್ನು ಪೋಣಿಸಿ ಮದವಣಿಗನಿಗಾಗಿ ಮಾಲೆಯನ್ನು ಮಾಡಿದೆ. ಮದುವೆಯಾದ ಮೇಲೆ ಮದವಣಿಗಿತ್ತಿಯು ತೌರುಮನೆ ಬಿಟ್ಟು ತನ್ನ ಒಡೆಯನನ್ನು ಸರಿ ರಾತ್ರಿಯಲ್ಲಿ ಒಬ್ಬಳೇ ಕಾಣುವಳು."

ಹೀಗೆ ಸಾವಧಾನವಾಗಿ ಮರಣವನ್ನು ಎದುರುನೋಡುತ್ತಿರುವವನಿಗೆ ಈ ಪ್ರಪಂಚದಲ್ಲಿ ವ್ಯಕ್ತವಾಗಿರುವ ದೈವನಿಯಮವೂ ಈ ಪ್ರಪಂಚದ ಸೌಂದರ್ಯಾದಿ ಲಕ್ಷಣಗಳೂ ಕ್ಷಣಿಕವಲ್ಲವೆಂದೂ ಮೋಸವಲ್ಲವೆಂದೂ ಸ್ಪಷ್ಟವಾಗಿ ತಿಳಿಯುವುದು.—

> "ಈ ಪ್ರಪಂಚವು ನನ್ನ ದೃಷ್ಟಿಯಿಂದ ಸರಿದು ಜೀವವು ನನ್ನ ಕಣ್ಣಿಗೆ ಪರದೆಯನ್ನು ಹಾಕಿ ಸದ್ದಿಲ್ಲದೆ ಹೊರಟು ಹೋಗುವ ದಿನವು ಬರುತ್ತದೆಂದು ನಾನು ಬಲ್ಲೆನು.

"ಆದರೂ ನಕ್ಷತ್ರಗಳು ರಾತ್ರಿಯೆಲ್ಲ ಕಾವಲಿರುವುವು. ಪ್ರಭಾತವು ಎಂದಿನಂತೆ ಎದ್ದು ಬರುವುದು. ಗಳಿಗೆಗಳು ಎಂದಿನಂತೆ ಕಷ್ಟ ಸುಖಗಳನ್ನು ದಡಕ್ಕೆ ಹಾಕುವ ಸಮುದ್ರ ತರಂಗಗಳಂತೆ ಉಬ್ಬಿ ಏಳುವುವು.

"ನನ್ನ ಕಾಲದ ಈ ಅವಧಿಯನ್ನು ನೆನೆದುಕೊಂಡಾಗ್ಗ ತೆರೆಯಾಗಿರುವ ಕ್ಷಣಗಳು ಬಿದ್ದುಹೋಗಿ ಮೃತ್ಯುವಿನ ತೇಜಸ್ಸಿನಲ್ಲಿ ಜೀವನದ ಅಪರಿಮಿತವಾದ ಐಶ್ವರ್ಯವು ಕಂಡುಬರುವುದು. ಅದರ ಅತಿ ತಗ್ಗಿನ ಆಸನವೂ ಅಸಾಧಾರಣವಾದುದು. ಅದರ ಅಧಮತಮ ಜೀವನವೂ ಶ್ರೇಷ್ಠವಾದುದು."

ಜ್ಞಾನಿಯಾದವನಿಗೆ ಸತ್ತಮೇಲೆ ಬರುವ ಸ್ವರ್ಗ ಮಾತ್ರ ಶ್ರೇಷ್ಠವಲ್ಲ; ಮುಕ್ತಿಯೆಂದು ಕರೆಯುವ ಅವಸ್ಥೆ ಮಾತ್ರ ಉತ್ತಮವಲ್ಲ. ಈ ಜೀವನದ ನಿಕೃಷ್ಟವಾದ ಅವಸ್ಥೆಯೂ ಕೂಡ ಉತ್ತಮವಾದುದೇ ಅಹುದು. ಅದು ಪರಮಾತ್ಮನ ಪ್ರಪಂಚದಲ್ಲಿ ಸೇರಿದೆ.

ಮೃತ್ಯು ಬಂದಾಗ್ಗೆ ಹೇಳುವುದೆಂದು ಕವಿಯು ಆಲೋಚಿಸಿಕೊಂಡಿರುವ ಮಾತುಗಳು ಇದೇ ಸಮಾಧಾನ ಸ್ಥಿತಿಯನ್ನು ತೋರಿಸುತ್ತವೆ.—

"ನನಗೆ ಅಪ್ಪಣೆ ಬಂದಿದೆ, ಅಣ್ಣ! ನಾನು ಹೋಗಿಬರುತ್ತೇನೆ. ನಿಮಗೆಲ್ಲ ನಮಸ್ಕಾರ; ಅನುಜ್ಞೆಯನ್ನು ಕೊಡಿ. ಇಗೋ ನನ್ನ ಮನೆಯ ಬೀಗದ ಕೈಗಳು. ನನ್ನ ಮನೆಯಲ್ಲಿ ನನಗಿರುವ ಅಧಿಕಾರವನ್ನೆಲ್ಲ ಬಿಟ್ಟಿದ್ದೇನೆ. ನನಗೆ ಇನ್ನೇನೂ ಬೇಡ. ನೀವು ಕೊನೆಯ ಮಾತಾಗ ವಿಶ್ವಾಸದ ಎರಡು ಮಾತುಗಳನ್ನು ಹೇಳಿದರೆ ಸಾಕು. ನಾವು ಬಹುಕಾಲ ನೆರೆಹೊರೆಯಾಗಿದ್ದೆವು. ನಾನು ಕೊಟ್ಟದ್ದಕ್ಕಿಂತ ನಿಮ್ಮಿಂದ ತೆಗೆದುಕೊಂಡಿರುವುದೇ ಹೆಚ್ಚು. ಈಗ ಉದಯವಾಯಿತು. ನನ್ನ ಮೂಲೆಯ ದೀಪವು ಆರಿಹೋಯಿತು. ಆಜ್ಞೆ ಬಂದದ್ದರಿಂದ ನಾನು ಪ್ರಯಾಣಕ್ಕೆ ಸಿದ್ಧನಾಗಿದ್ದೇನೆ.

"ನನ್ನ ಪ್ರಯಾಣವು ಮುಗಿದಾಗ ಸಂಜೆಯ ನಕ್ಷತ್ರವು ಶೋಭಿಸುವುದು. ಸಂಧ್ಯಾಕಾಲದ ರಸಭರಿತವಾದ ಗಾನವು ರಾಜರಾಜನ ಬಾಗಿಲಿಂದ ಕೇಳಿಬರುವುದು."

ಮೃತ್ಯು ಬರುವುದನ್ನು ನೋಡಿ ಹೆದರುವುದು ಅನವಶ್ಯಕವಲ್ಲವೆಂದು ಠಾಕೂರರವರು ವಿವರಿಸುವುದು ಬಹಳ ಲಕ್ಷಣವಾಗಿದೆ. ಈ ವಿವರವನ್ನು ತಿಳಿಯುವುದಕ್ಕೆ ಆತ್ಮಜ್ಞಾನವೇ ಬೇಕು.—

"ಈ ಜೀವನದಲ್ಲಿ ಹೊಸಲನ್ನು ದಾಟಿ ಬಂದದ್ದು ನನಗೆ ಜ್ಞಾಪಕವಿಲ್ಲ.

"ನಡು ರಾತ್ರಿಯಲ್ಲಿ ಕಾನನ ಮಧ್ಯದಲ್ಲಿ ಒಂದು ಹೂವಿನಂತೆ ಈ ವಿಸ್ತೃತ ಮಾಯೆಗೆ ನಾನು ಬರುವಂತೆ ಮಾಡಿದ ಶಕ್ತಿ ಯಾವುದು?

"ಬೆಳಗಾಗ ಬೆಳಕನ್ನು ನೋಡಿದಾಗ ನಾನು ಈ ಪ್ರಪಂಚದಲ್ಲಿ ಅಪರಿಚಿತನಲ್ಲವೆಂದೂ ರೂಪಿಲ್ಲದ ಗುಣವಿಲ್ಲದ ಅರಿಯಲಾಗದ ಪರವಸ್ತುವು ನನ್ನ ತಾಯಿ ಆಕಾರದಿಂದ ನನ್ನನ್ನು ಕೈಯಲ್ಲಿ ಹಿಡಿದಿತ್ತೆಂದೂ ತಿಳಿಯಿತು.

"ಹೀಗೆಯೇ ಮರಣದಲ್ಲಿಯೂ ಅದೇ ಅಪರಿಚಿತ ಪರವಸ್ತುವು ನನಗೆ ಪರಿಚಿತವಾಗಿ ಕಾಣುವುದು. ಹಿಂದೆ ತಿಳಿಯದೆ ಇದ್ದ ಈ ಜೀವನದಲ್ಲಿ ನನಗೆ ಈಗ ಮೋಹವಿರುವುದರಿಂದ ಈಗ ತಿಳಿಯದಿರುವ ಆ ಸಾವಿನಲ್ಲೂ ಮುಂದೆ ಮೋಹ ಬರುವುದೆಂದು ಬಲ್ಲೆನು.

"ತಾಯಿ ತನ್ನ ಬಲಗಡೆಯ ಮೊಲೆಯಿಂದ ಮಗುವನ್ನು ತೆಗೆದಾಗ ಅದು ಅಳುವುದು. ಇನ್ನೊಂದು ಕ್ಷಣದಲ್ಲಿ ಅದು ಎಡಗಡೆಯ ಮೊಲೆಯಲ್ಲಿ ಸಮಾಧಾನವನ್ನು ಪಡೆಯುವುದು."

ಮೃತ್ಯುವನ್ನು ಸಮಾಧಾನದಿಂದ ನಿರೀಕ್ಷಿಸುವುದರಲ್ಲಿ ಇನ್ನೊಂದು ಭಾವವುಂಟು. ಈ ಜೀವನದಿಂದ ಪಡೆಯಬೇಕಾದ ಸಂಸ್ಕಾರವನ್ನು ಪಡೆದದ್ದಾಯಿತು ಎಂಬುದೇ ಆ ಭಾವ.

"ಅಸಂಖ್ಯಾಕ ರೂಪಗಳಿಂದ ತುಂಬಿರುವ ಈ ಆಟದ ಮಧ್ಯದಲ್ಲಿ ನಾನು ಆಟವಾಡಿದ್ದಾಯಿತು. ರೂಪ ರಹಿತವಾದದ್ದನ್ನು ಇಲ್ಲಿ ರೂಪಿಯಾಗಿ ನೋಡಿದ್ದಾಯಿತು."

"ರೂಪ ರಹಿತ ರತ್ನವನ್ನು ಸಂಪಾದಿಸುವುದಕ್ಕೆ ನಾನು ರೂಪಗಳ ಸಾಗರದಲ್ಲಿ ಮುಳುಗಿದೆನು. ಈ ಹಳೆಯ ದೋಣಿಯೊಂದಿಗೆ ಇನ್ನು ಮೇಲೆ ರೇವಿನಿಂದ ರೇವಿಗೆ ಹೋಗುವುದಿಲ್ಲ."

ಕವಿಗೆ ಪರವಸ್ತು ವಿಜ್ಞಾನವು ಬಂದು ಅದರ ಫಲವಾಗಿ ಜೀವನವು ಸಾರ್ಥಕವಾದುದರಿಂದ ಇದಕ್ಕೆ ಸಾಧಕವಾದ ತನ್ನ ಗೀತಗಳನ್ನು ಕುರಿತು ಹೀಗೆಂದು ಹೇಳಿದ್ದಾನೆ:—

"ನನ್ನ ಜೀವನದಲ್ಲೆಲ್ಲ ನನ್ನ ಗೀತಗಳ ಮೂಲಕ ನಾನು ನಿನ್ನನ್ನು ಅನ್ವೇಷಿಸಿದ್ದೇನೆ. ಬಾಗಿಲಿನಿಂದ ಬಾಗಿಲಿಗೆ ನನ್ನನ್ನು ಕರೆದುಕೊಂಡು ಹೋದುವು ಅವು. ಅವುಗಳಿಂದ ನಾನು ನನ್ನ ಪ್ರಪಂಚವನ್ನು ತಡವುತ್ತ ಮುಟ್ಟುತ್ತ ಸುತ್ತಣ ಸ್ಥಿತಿಗಳನ್ನು ತಿಳಿದೆನು. ನಾನು ಕಲಿತ ಪಾಠ

ಗಳನ್ನೆಲ್ಲ ನನ್ನ ಗೀತಿಗಳು ನನಗೆ ಕಲಿಸಿಕೊಟ್ಟವು. ಹೃದಯಾಕಾಶದ ಅಂಚಿನ ಅನೇಕ ನಕ್ಷತ್ರಗಳನ್ನು ಅವು ನನ್ನೆದುರಿಗೆ ತಂದು ಬಿಟ್ಟುವು.

"ಹಾಡಿನಲ್ಲಿರುವ ಚಿತ್ರವೆಲ್ಲ ದೇವ ದೇವನವು. ಅಲ್ಲಿರುವ ನುಡಿಯೆಲ್ಲ ಅವನನ್ನು ಕುರಿತುದು. ಗಾನವೇ ಅಲ್ಲದೆ ಅರ್ಥವೂ ದೇವರನ್ನು ಕುರಿತುದು."

ಕವಿಯು ಜೀವನದ ಸ್ವಭಾವವನ್ನು ತಿಳಿದಿರುವುದರ ಫಲವಾಗಿ ತನಗೆ ತೋರಿರುವ ಕೆಲವು ವಿಷಯಗಳನ್ನು 'ಗೀತಾಂಜಲಿ'ಯಲ್ಲಿ ನಾಲ್ಕೈದು ಪದ್ಯಗಳಲ್ಲಿ ಸೂಚಿಸಿದ್ದಾನೆ. ಭಗವಂತನಿಗೆ ನಿಕೃಷ್ಟವಿಲ್ಲ ಉತ್ಕೃಷ್ಟವಿಲ್ಲೆಂಬುದು ಈ ವಿಷಯಗಳಲ್ಲಿ ಒಂದು. ನಿರ್ಗತಿಕರೂ ನಿಕೃಷ್ಟರೂ ನಷ್ಟರೂ ನಿಂತಿರುವಲ್ಲಿ ದೇವರು ನಿಂತಿರುವನು. ದೇವರಿಗೆ ನಮಸ್ಕಾರಮಾಡುವ ನಾವು ಅವನು ನಿಂತಿರುವಷ್ಟು ತಗ್ಗಿಗೆ ತಲೆಯನ್ನು ತಗ್ಗಿಸಲಾರೆವು.—

"ನಿರ್ಗತಿಕ ನಿಕೃಷ್ಟ ನಷ್ಟರಲ್ಲಿ ಒಂಟಿಗಾರರ ಜೊತೆಯಲ್ಲಿ ನೀನು ಇರುವ ಸ್ಥಳಕ್ಕೆ ನನ್ನ ಹೃದಯವು ಹೋಗಲಾರದು."

ಪ್ರಪಂಚದಲ್ಲಿ ಸಾಕಾದಷ್ಟು ಕಷ್ಟಗಳಿರುವುದರಿಂದ ನಾವು ಸಹಾಯವಿಲ್ಲದವರಿಗೆ ಸಹಾಯರಾಗಿ ಕಷ್ಟವನ್ನು ನಿವಾರಿಸುವುದಕ್ಕೆ ನಿಲ್ಲಬೇಕು.—

"ಈ ಮಂತ್ರವನ್ನೂ ತಂತ್ರವನ್ನೂ ಜಪಮಣಿಯ ಜಪವನ್ನೂ ಬಿಡು. ಕದವನ್ನೆಲ್ಲ ಮುಚ್ಚಿ ಈ ಕತ್ತಲ ಗುಡಿಯ ಮೂಲೆಯಲ್ಲಿ ಯಾರನ್ನು ಪೂಜಿಸುತ್ತೀಯೆ? ಕಣ್ತೆರೆದು ನೋಡು: ದೇವರು ನಿನ್ನೆದುರಿಗಿಲ್ಲ. ಕೃಷಿಕನು ಎಲ್ಲಿ ಉಳುತ್ತಿರುವನೋ, ರಸ್ತೆಮಾಡುವವನು ಎಲ್ಲಿ ಕಲ್ಲನ್ನು ಒಡೆಯುವನೋ ಅಲ್ಲಿ ಅವನಿದ್ದಾನೆ. ಅವನು ಮಳೆಯೆನ್ನದೆ ಬಿಸಿಲೆನ್ನದೆ ಅವರ ಜೊತೆಗೆ ಇದ್ದಾನೆ. ಅವನ ಬಟ್ಟೆ ಮಣ್ಣಾಗಿದೆ. ನಿನ್ನ ಮಡಿವಸ್ತ್ರವನ್ನು ತೆಗೆದು ಹಾಕು. ಅವನಂತೆಯೇ ಧೂಳಿಗೆ ಬಾ.

"ಮುಕ್ತಿಯೆ! ಈ ಮುಕ್ತಿ ಎಲ್ಲಿಯದು? ನನ್ನೊಡೆಯನೇ ತನ್ನ ಮೇಲೆ ತಾನು ಸೃಷ್ಟಿಯ ಭಾರವನ್ನು ಹಾಕಿಕೊಂಡಿದ್ದಾನೆ. ಅವನು ನಮ್ಮೆಲ್ಲರೊಂದಿಗೆ ಕಟ್ಟುಬಿದ್ದಿದ್ದಾನೆ. ಜಪವನ್ನು ಬಿಟ್ಟು ಹೂಗಂಧಗಳನ್ನು ಒತ್ತಟ್ಟಿಗಿಟ್ಟು ಬಾ. ನಿನ್ನ ಬಟ್ಟೆ ಚಿಂದಿಯಾದರೆ ಏನು? ಕೊಳೆಯಾದರೆ ಏನು? ಕಷ್ಟದಲ್ಲಿ ಅವನೊಂದಿಗೆ ಬೆರೆತು ಅವನ ಜೊತೆಯಲ್ಲಿ ನಿಲ್ಲು."

ಜೀವನದ ನಡತೆಯ ವಿಷಯದಲ್ಲಿ ಕವಿಯು ಮಾಡುವ ಪ್ರಾರ್ಥನೆಯು:—

"ನನ್ನ ಒಡೆಯ! ನಾನು ನಿನ್ನನ್ನು ಪ್ರಾರ್ಥಿಸುವುದಿಷ್ಟೆ. ನನ್ನ ಹೃದಯದ ಕಾರ್ಪಣ್ಯವನ್ನು ನಿರ್ಮೂಲ ಮಾಡು. ಕಷ್ಟವನ್ನೂ ಸುಖವನ್ನೂ ಲಘುವಾಗಿ ಧರಿಸುವುದಕ್ಕೆ ನನಗೆ ಶಕ್ತಿಯನ್ನು ಕೊಡು. ನನ್ನ ಪ್ರೀತಿಯನ್ನು ಸೇವೆಯಲ್ಲಿ ಫಲಿಸುವಂತೆ ಮಾಡುವುದಕ್ಕೆ ನನಗೆ ಶಕ್ತಿಯನ್ನು ಕೊಡು. ದರಿದ್ರನನ್ನು ನನ್ನವನಲ್ಲವೆನ್ನದಂಥ ಭಕ್ತಿಯನ್ನೂ ಔದ್ಧತ್ಯದ ಕೊಬ್ಬಿಗೆ ತಲೆಯನ್ನು ತಗ್ಗಿಸದಂಥ ಶಕ್ತಿಯನ್ನೂ ನನಗೆ ಕೊಡು. ದಿನದಿನದ ಅಲ್ಪ ವಿಷಯವನ್ನು ಮೀರಿ ಮನಸ್ಸನ್ನು ಹಿಡಿಯಲು ನನಗೆ ಶಕ್ತಿಯನ್ನುಂಟುಮಾಡು."

ಇನ್ನೊಬ್ಬರಿಗೆ ಕಷ್ಟಕ್ಕಾಗದೆ ಆರ್ಜನೆಯನ್ನು ಡಂಭದಲ್ಲಿ ಕಳೆಯುವವರಿಗೂ ಎಂಬಂತೆ ಕವಿಯು ಈ ಪದ್ಯವನ್ನು ಬರೆದಿದ್ದಾನೆ:—

"ನಿರ್ಮಾನುಷವಾದ ನದೀ ತೀರದಲ್ಲಿ ಹುಲ್ಲಿನ ನಡುವೆ ನಿಂತು ನಾನು 'ಅಮ್ಮಾ! ನಿನ್ನ ದೀಪವನ್ನು ಸೆರಗಿನಿಂದ ಮುಚ್ಚಿಕೊಂಡು ಎಲ್ಲಿಗೆ ಹೋಗುವೆ? ನನ್ನ ಮನೆಗೆ ದೀಪವಿಲ್ಲ, ಕತ್ತಲಾಗಿದೆ; ನಿನ್ನ ದೀಪವನ್ನು ಕೊಡು' ಎಂದು ಕೇಳಿದೆನು. ಅವಳು ಒಂದು ಕ್ಷಣ ಕಣ್ಗಳನ್ನೆತ್ತಿ ಕತ್ತಲೆಯಲ್ಲಿ ನನ್ನ ಮುಖವನ್ನು ನೋಡಿ, 'ಸೂರ್ಯನು ಮುಳುಗಿದ ಮೇಲೆ ನದಿಯಲ್ಲಿ ದೀಪವನ್ನು ತೇಲಿಸುವುದಕ್ಕೆ ನಾನು ಬಂದಿದ್ದೇನೆ' ಎಂದಳು. ನಾನು ಹುಲ್ಲಿನ ನಡುವೆ ನಿಂತಿದ್ದು ಅವಳ ದೀಪವು ಗಾಳಿಯಲ್ಲಿ ಅಲೆಯುತ್ತ ವ್ಯರ್ಥವಾಗಿ ಪ್ರವಾಹದಲ್ಲಿ ತೇಲಿ ಹೋದುದನ್ನು ನೋಡುತ್ತಿದ್ದೆನು.

"ಕತ್ತಲೆ ಕವಿದು ರಾತ್ರಿ ನಿಶ್ಶಬ್ದವಾದಾಗ ನಾನು ಹೇಳಿದೆನು: 'ಅಮ್ಮಾ! ನಿನ್ನ ಮನೆಯು ದೀಪಗಳನ್ನೆಲ್ಲ ಹಚ್ಚಿದೆ. ಈ ದೀಪವನ್ನು ಎಲ್ಲಿಗೆ ತೆಗೆದುಕೊಂಡು ಹೋಗುವೆ. ನನ್ನ ಮನೆಯಲ್ಲಿ ದೀಪವಿಲ್ಲ, ಕತ್ತಲೆಯಾಗಿದೆ. ನಿನ್ನ ಈ ದೀಪವನ್ನು ಕೊಡು.' ಅವಳು ನನ್ನ ಮುಖವನ್ನು ನೋಡಿ ಒಂದು ಕ್ಷಣ ಸಂದೇಹದಲ್ಲಿದ್ದಳು. ಆಮೇಲೆ, 'ನನ್ನ ದೀಪವನ್ನು ಸ್ತಂಭದ ಮೇಲೆ ಆಕಾಶದಲ್ಲಿಡಲು ತಂದಿದ್ದೇನೆ' ಎಂದಳು. ನಾನು ಅಲ್ಲಿಯೇ ನಿಂತು ಅವಳಿಟ್ಟ ದೀಪವು ಆಕಾಶದಲ್ಲಿ ವ್ಯರ್ಥವಾಗಿ ಉರಿಯುವುದನ್ನು ನೋಡುತ್ತಿದ್ದೆನು.

"ಚಂದ್ರನಿಲ್ಲದ ನಡುರಾತ್ರಿಯಲ್ಲಿ ನಾನವಳನ್ನು ಬೇಡಿದೆನು: 'ಅಮ್ಮಾ! ಈ ದೀಪವನ್ನು ಹತ್ತಿರ ಹಿಡಿದುಕೊಂಡು ಏನನ್ನು ಹುಡುಕುತ್ತ

ಲಿರುವೆ? ನನ್ನ ಮನೆಯಲ್ಲಿ ದೀಪವಿಲ್ಲ, ಕತ್ತಲಾಗಿದೆ; ನಿನ್ನ ದೀಪವನ್ನು ನನಗೆ ಕೊಡು.' ಅವಳು ಒಂದು ನಿಮಿಷ ನಿಂತು ಆಲೋಚನೆಮಾಡಿ ಕತ್ತಲಲ್ಲಿ ನನ್ನ ಮುಖವನ್ನು ನೋಡಿದಳು. 'ನನ್ನ ದೀಪವನ್ನು ಕೃತ್ತಿಕೆಯ ದೀಪಾವಳಿಗಾಗಿ ತಂದಿರುವೆನು' ಎಂದಳು. ನಾನು ಅಲ್ಲಿ ನಿಂತಿದ್ದು ಅಲ್ಲಿಯ ದೀಪಗಳ ಸಮುದಾಯದಲ್ಲಿ ಅದು ಎಲ್ಲೋ ಉರಿಯುತ್ತಿದ್ದುದನ್ನು ನೋಡಿದೆನು.''

ಕವಿಯ ಪರವಾಗಿ ನೋಡಿದರೆ ಈ ಪದ್ಯಗಳು ಒಂದೇ ತೂಕವಾಗಿ ಕಂಡರೂ ಓದುವವರ ಪರವಾಗಿ ಮಾತೃಭೂಮಿಯ ವಿಷಯವಾದ ಈ ಪ್ರಾರ್ಥನೆಯು ಅತ್ಯುತ್ತಮವಾದುದೆಂದು ಕಾಣಬಹುದು :—

''ಎಲ್ಲಿ ಮನಸ್ಸು ಭಯವನ್ನರಿಯದೋ
ತಲೆಯನ್ನೆತ್ತಿ ನಡೆಯುವುದೆಲ್ಲಿಯೋ
''ಎಲ್ಲಿ ತಿಳಿವು ಎಲ್ಲರಿಗೂ ಧಾರಾಳವಾಗಿರುವುದೋ
''ಎಲ್ಲಿ ಸತ್ಯದ ಆಳದಿಂದ ಮಾತು ಬರುವುದೋ
''ಮನೆ ಮನೆಯ ಗೋಡೆಗಳಿಂದ ಪ್ರಪಂಚವು ಲಕ್ಷೋಪಲಕ್ಷ
ಸಣ್ಣ ಸಣ್ಣ ಭಾಗಗಳಾಗಿ ವಿಭಾಗವಾಗದುದು ಎಲ್ಲಿಯೋ
''ಎಲ್ಲಿ ಬುದ್ಧಿಯ ಸ್ವಚ್ಛ ವಾಹಿನಿಯು ವಿಚಾರ ವಿಹೀನವಾದ ಪದ್ಧತಿ
ಯೆಂಬ ಮರುಭೂಮಿಯಲ್ಲಿ ದಾರಿ ತಪ್ಪಿ ಮರೆಯಾಗಿಲ್ಲವೋ
''ನಿರಂತರ ಪ್ರಯತ್ನವು ಸರ್ವದಾ ಎಲ್ಲಿ ಪಾರಮ್ಯದ ಕಡೆಗೆ
ಕೈನೀಡಿ ನಡೆಯುತ್ತಿರುವುದೋ
''ದೇವದೇವ! ಆ ಸ್ವಾತಂತ್ರ್ಯದ ಸ್ವರ್ಗದಲ್ಲಿ
ನನ್ನ ಮಾತೃಭೂಮಿಯು ಎಚ್ಚರಗೊಳಲಿ.''

೩

ಗೀತಾಂಜಲಿಯ ಮುಖ್ಯ ಭಾವಗಳ ಈ ಸಂಕ್ಷೇಪ ಶ್ರವಣದಿಂದ ಪಾಠಕರಿಗೆ ಆ ಕಾವ್ಯದ ಸ್ವಭಾವವು ಸ್ವಲ್ಪ ಮಟ್ಟಿಗಾದರೂ ತಿಳಿದಿರಬಹುದು. ಮೊತ್ತದಲ್ಲಿ ಅದು ಕವಿಯ ಆತ್ಮ ಸಂಸ್ಕಾರದ ಅವಸ್ಥಾ ವಿಶೇಷಗಳನ್ನು ಸೂಚಿಸತಕ್ಕ ಗೀತಗಳ ಸಮುಚ್ಚಯ. ಅದು ನಮ್ಮ ದಾಸರ ಪದಗಳ ರೀತಿಯ ಪದ್ಯಗಳನ್ನೇ ಒಳಗೊಂಡಿದೆಯೆಂದು ಸ್ಪಷ್ಟವಾಗಿರಬೇಕು. ಪುರಂದರ ದಾಸರ ''ಉದರ ವೈರಾಗ್ಯವಿದು'' ಅಥವಾ, ''ಜನ್ನಹಕೆ ಬಾಯಿಲ್ಲವಯ್ಯ'' ಅಥವಾ, ಕನಕ ದಾಸರ ''ತನು ನಿನ್ನದು ಜೀವನ ನಿನ್ನದು'' ಎಂಬ ದೇವರನಾಮಗಳ ಮುಖ್ಯ ಲಕ್ಷಣವನ್ನು ಈ

ಪದ್ಯಗಳಲ್ಲಿ ಕಾಣಬಹುದು. ಆದರೆ ಗೀತಾಂಜಲಿಯಲ್ಲಿ ಒಂದು ವಿಶೇಷವುಂಟು. ಪುರಂದರ ದಾಸರಿಗೆ ದೈವ ಸಾನ್ನಿಧ್ಯವು ಪ್ರಾಪ್ತವಾದ ದಾರಿಯು ಅವರ ಗೀತೆಗಳಿಂದ ಹೊರಪಡುವುದಿಲ್ಲ. ಅವರ ಪ್ರಸನ್ನ ಜೀವನದ ಉತ್ತರಾವಸ್ಥೆಯು ಮಾತ್ರ ಅವರ ಗೀತೆಗಳಲ್ಲಿ ಕಾಣಬರುವುದು. ದಾಸರ ಗೀತೆಗಳಲ್ಲಿ ನೀತಿಯೂ ಧರ್ಮವೂ ಮಾನವನ ಜೀವನದಂತೆಯೇ ಸರಳವಾಗಿವೆ. ದಾಸರಿಗೆ ದೇವರು ಸುಲಭನು. ಅವರಿಗೆ ದೇವರಲ್ಲದೆ ಇನ್ನು ಯಾವುದೂ ದೃಗ್ಗೋಚರವಲ್ಲ: "ನನ್ನ ರಂಗನನ್ನು ಕಂಡ ಕಣ್ಣು ಇನ್ನು ಏನನ್ನೂ ಕಾಣದು." ಅವರ ಪ್ರಕೃತಿಯೆಲ್ಲವೂ ಪರಾತ್ಪರ ವಸ್ತುವಿನ ಸಾಮೀಪ್ಯದ ಆನಂದಾನುಭವದಲ್ಲಿ ಪರಿಣಾಮಗೊಳ್ಳುತ್ತಿದ್ದಿತು. ಅವರ ಯಾತ್ರೆಯ ಅವಧಿಯು ಅವರ ಗೀತೆಗಳಲ್ಲಿ ತೋರಿಬರುವುದೇ ಹೊರತು ಅವರು ಯಾತ್ರೆಯಲ್ಲಿ ಇಟ್ಟ ಅಡಿಗಳ ಗುರುತು ನಮಗೆ ಕಾಣುವುದಿಲ್ಲ. ಗೀತಾಂಜಲಿಯಲ್ಲಾದರೋ ಕವಿಯು ಪರವಸ್ತುವನ್ನು ಸಮೀಪಿಸುವುದರಲ್ಲಿ ಇಟ್ಟ ಹೆಜ್ಜೆಗಳೂ ಕಂಡುಬರುವವು. ಇನ್ನೊಂದು ವಿಶೇಷವೇನೆಂದರೆ, ಪುರಂದರ ದಾಸರದು ಕೇವಲ ನಿವೃತ್ತಿ ಮಾರ್ಗವೇ ಆಗಿರುವಲ್ಲಿ, ಗೀತಾಂಜಲಿಯ ಕವಿಯ ಮಾರ್ಗವು ಬಹು ಮಟ್ಟಿಗೆ ಪ್ರವೃತ್ತಿಯ ಮಾರ್ಗ. ದಾಸರು ಭಕ್ತರು ಮಾತ್ರ. ಕವಿಯು ಭಕ್ತನೂ ಅಹುದು; ಜೊತೆಗೆ ಸಾಮಾನ್ಯ ಜನರಲ್ಲಿ ಸೇರಿದವನೂ ಅಹುದು. ಭಕ್ತರ ದೆಸೆಯಿಂದ ಇತರರ ಮನಸ್ಸಿನಲ್ಲಿ ಭಕ್ತಿ ಭಾವಗಳು ತಲೆದೋರಬಹುದು; ಆದರೆ ದಾಸರಂತಹ ಭಕ್ತರು ಸಾಮಾನ್ಯರಿಗಿಂತ ಬಹಳ ಮುಂದು. ಕವಿಯಾದರೋ ಸಾಮಾನ್ಯರ ಜೊತೆಗೆ ನಿಂತು ತಾನು ನಡೆದ ದಾರಿಯಲ್ಲಿ ಅವರನ್ನು ಹಿಡಿದು ಒಯ್ಯುವನು. ದಾಸರು ದುರ್ಗಮವೆಂದು ತೋರುವ ಗಿರಿಯ ಶಿಖರವನ್ನೈದಿ ಕೆಳಗಿರುವರನ್ನು ಕರುಣೆಯಿಂದ ನೋಡುತ್ತಿರುವರಂತೆ ಅಥವಾ ಮೇಲಕ್ಕೆ ಬನ್ನಿರೆಂದು ಕರೆಯುತ್ತಿರುವಂತೆ ತೋರುವುದು. ಕವಿಯು ದುರ್ಬಲರಾದವರನ್ನು ಕರೆದುಕೊಂಡು ಮಲೆಯನ್ನೇರುವ ಸುಲಭವಾದ ದಾರಿಯಲ್ಲಿ ಸಾಧ್ಯವಾದಷ್ಟು ದೂರ ಅವರನ್ನು ನಡೆಯಿಸಿಕೊಂಡು ಹೋಗುವಂತಿರುವನು.

ಕವಿಯು ಆತ್ಮ ಸಂಸ್ಕಾರದ ಅವಸ್ಥಾ ವಿಶೇಷಗಳನ್ನು ಕುರಿತ ಈ ಗೀತೆಗಳನ್ನು ಓದಿದಾಗ ಅನೇಕರು ಸಂತೋಷಪಟ್ಟರಾದರೂ ಕೆಲವರು ಅದರಲ್ಲಿ ಕೆಲವು ದೋಷಗಳನ್ನು ಕಂಡರು. ಸನಾತನಾರ್ಯರು ವೇದಾಂತದಲ್ಲಿ ಏರಿ ನಿಂತ ಉನ್ನತ ಪ್ರದೇಶಗಳ ಪರಿಚಯವನ್ನುಳ್ಳ ತತ್ತ್ವಜ್ಞರು, ಕವಿಯು ಹೇಳಿರುವುದು ಅಷ್ಟು ಹೊಸ ವಿಷಯವಲ್ಲ, ವೇದಾಂತದಲ್ಲಿ ತುಂಬಿ ತುಳುಕುತ್ತಿರುವ ತತ್ತ್ವದ ಒಂದೆರಡು ಮಾತನ್ನು ಮಾತ್ರ ಅಲ್ಲಿ ಇಲ್ಲಿ ಹೇಳಿದ್ದಾನೆ ಎಂದರು. ಇದನ್ನು ಕಾವ್ಯದಲ್ಲಿ ದೋಷವೆಂದು ಹೇಳುವುದು ತಿಳಿದವರ ಮಾತಲ್ಲ. ವೇದಾಂತದಲ್ಲಿ ಹೇಳಿರುವುದೆಲ್ಲವೂ ಒಂದೇ ಸಲ ಹೇಳಿದ ಮಾತಲ್ಲ. ಕಾಲಾನುಕ್ರಮವಾಗಿ ಅನೇಕ ಜನ ರಾಜರ್ಷಿಗಳೂ ಮುನಿವರ್ಯರೂ ಇತರ ತತ್ತ್ವಜ್ಞರೂ ತಮಗೆ ತೋರಿದ ವಿಷಯಗಳನ್ನು ನಿರೂಪಿಸುತ್ತ ಬರಲು ಎಲ್ಲರ ಮಾತೂ ಸೇರಿ ವೇದಾಂತವಾಯಿತು. ವೇದಾಂತವನ್ನು ಕೇವಲ ಓದುವವರಿಗೆ ಅದರಲ್ಲಿಯ ವಿಷಯಗಳು ಬುದ್ಧಿಯ ಮುಖವಾಗಿ ಮನಸ್ಸನ್ನು ಸೇರಿದರೂ ಆ ಯಾವ ಒಂದು ವಿಷಯವೇ ಆಗಲಿ ಆತ್ಮವನ್ನು ಮುಟ್ಟಿದಂತಾಗಲಾರದು. ಯಾವಾಗ ಒಬ್ಬನಲ್ಲಿ ಹಿಂದಣ ಆ ರಾಜರ್ಷಿಗಳಲ್ಲಿ ಹೇಗೋ ಹಾಗೆ ಒಂದು ಭಾವವು ಅಂತರ್ಯದಿಂದ ಆವಿರ್ಭವಿಸುವುದೋ ಆಗಲೇ ವೇದಾಂತದ ಆ ಭಾವವು ಅವನಲ್ಲಿ ಸಿದ್ಧಿಯಾಯಿತೆಂದು ಹೇಳಬಹುದು. ಸೃಷ್ಟಿಯ ಮಾಯೆಯನ್ನು ಒಡೆಯಲಾರದ ಸೋಲಿನ ಆಧಿಕ್ಯವು ಉಪನಿಷತ್ತುಗಳಲ್ಲಿ ಅಲ್ಲಲ್ಲಿ ರೂಪುಗೊಂಡಿದೆ. ಆದರೆ ಕನಕ ದಾಸರು "ಸವಿಯೊಳಗೆ ಸಕ್ಕರೆಯೊ ಸಕ್ಕರೆಯೊಳಗೆ ಸವಿಯೊ" ಎಂದು ಆಶ್ಚರ್ಯದಿಂದ ಜಿಜ್ಞಾಸಮಾಡುವುದು ಅವರ ಜೀವನದಲ್ಲಿ ಅಪ್ರಕೃತವಲ್ಲ. ಒಬ್ಬೊಬ್ಬನ ಜೀವವೂ ಪರವಸ್ತುವಿನ ಸಾಧನದಲ್ಲಿ ಈ ರೀತಿ ಸಂಸ್ಕಾರವನ್ನು ಪಡೆಯಬೇಕು. ಕವಿಯು ವೇದಾಂತದ ಒಂದೆರಡು ಮಾತನ್ನು ಮಾತ್ರ ಹೇಳಿರುವನೆಂಬ ಆಕ್ಷೇಪಕ್ಕೂ ಇದು ಸಮಾಧಾನ. ವೇದಾಂತದಲ್ಲಿ ಹೇಳಿರುವ ಮಾತಾಗಿ ಅವನು ಅದನ್ನು ವರ್ಣಿಸಿಲ್ಲ. ತನ್ನ ಜೀವದ ಬೆಳೆವಣಿಗೆಯಲ್ಲಿ ತೋರಿಬಂದು ತನ್ನಲ್ಲಿ ಸಿದ್ಧವಾದ ಭಾವವಾಗಿ ವರ್ಣಿಸಿದ್ದಾನೆ. ಆದದ್ದರಿಂದ ಅದಕ್ಕೆ ಸಾರ್ಥಕ್ಯ ಉಂಟು.

ಒಂದು ಪಂಗಡದ ಜನರು ಈ ಆಕ್ಷೇಪವನ್ನು ಸೂಚಿಸುತ್ತಿರುವಲ್ಲಿ ಇನ್ನೊಂದು ಪಂಗಡದವರು ಇನ್ನೊಂದು ಆಕ್ಷೇಪವನ್ನು ಉಗ್ಗಡಿಸಿ ಹೇಳಿದರು. ನಮ್ಮ ಸೀಮೆಯು ಈಗ ಬಡತನದಲ್ಲಿ ದುಃಖಿಸುತ್ತಿರುವಾಗ ಅದು ಮುಂದಕ್ಕೆ ಬರುವ ರೀತಿ ಯಾವುದೆಂದು ಹೇಳಿಕೊಡುವುದನ್ನು ಬಿಟ್ಟು ಕೋಣೆಯಲ್ಲಿ ಕುಳಿತು ದೇವರ ಸಾನ್ನಿಧ್ಯದಲ್ಲಿ ಹೇಳುವ ಗೀತೆಗಳನ್ನು ಕವಿಯು ಬರೆದು ಆದ ಉದ್ಧಾರವೇನು? ಎಂಬುದು ಇವರ ಆಕ್ಷೇಪ. ರಾಜ್ಯದ ಸರ್ವತೋಮುಖವಾದ ದುರವಸ್ಥೆಯನ್ನು ನೆನೆದ ಕ್ಷಣದಲ್ಲಿ ಯಾರಿಗಾದರೂ ಹೀಗೆಂದು ತೋರಬಹುದು. ಆದರೆ ಒಟ್ಟಿನಲ್ಲಿ ಈ ಆಕ್ಷೇಪವು ಒಪ್ಪತಕ್ಕದ್ದಲ್ಲ. ಕವಿಯು ಹೇಳಿರುವ ವಿಷಯಗಳನ್ನು ತಿಳಿದುಕೊಂಡೆವಾದರೆ ರಾಜ್ಯದ ಜೀವನವು ಎಷ್ಟು ಸುಖಸಂಪತ್ತಿಯಿಂದ ಕೂಡಿಕೊಳ್ಳಬಹುದು! ದೊಡ್ಡವರು ಚಿಕ್ಕವರು ಎಂಬ ಭೇದವನ್ನು ಬಿಟ್ಟು ಎಷ್ಟು ನಿಕೃಷ್ಟರಾದವರೂ ದೇವದೇವನ ಪ್ರೀತಿಗೆ ಪಾತ್ರರಾಗಿರುವರೆಂಬುದನ್ನು ನೆನೆದು ಅವರಿಗೆ ನೆರವಾಗಿ ನಿಲ್ಲಬೇಕೆನ್ನುವುದು ಎಷ್ಟು ಉತ್ತಮತರದ ಸಲಹೆ! ಪ್ರಪಂಚದಲ್ಲಿ ಗಳಿಸುವ ಧನ ಕನಕ ಸೌಭಾಗ್ಯಗಳು ದೇವರ ಸೇವೆಯಲ್ಲಿ ವಿನಿಯೋಗಿಸಲ್ಪಡದಿದ್ದರೆ ಬರಿಯ ಬಂಧನಗಳಾಗುವುವೆಂದು ಎಷ್ಟು ಸಲ ಹೇಳಿದರೆ ಸಾಕು? ಮನುಷ್ಯನ ಸ್ವಭಾವದ ತುಚ್ಛ ಪ್ರವೃತ್ತಿಗಳು ನಿರಂತರ ಪ್ರಯತ್ನದಿಂದ ಮಾತ್ರ ತಗ್ಗಬಹುದು. ಈ ಪ್ರಯತ್ನವಿಲ್ಲದಿದ್ದರೆ ಅವು ಅವನನ್ನು ಧ್ವಂಸಮಾಡಿ ಅವನ ಉತ್ತಮ ಪ್ರವೃತ್ತಿಗಳನ್ನು ಮರೆಯಿಸಿಬಿಡುವುವೆಂದೂ ನಮ್ಮ ಅಲ್ಪಾತ್ಮವು ನಾವು ಏನನ್ನೇ ಮಾಡಿದರೂ ನಮ್ಮನ್ನು ಬಿಡದೆ ಅನುಸರಿಸಿಕೊಂಡು ಬರುವುದೆಂದೂ ಹೇಳುವುದು ಅನವಶ್ಯಕವಾದ ಮಾತಲ್ಲ. ದೇವರು ನಮಗೆ ಕೊಟ್ಟಿರುವ ವಸ್ತುನಿಚಯವನ್ನು ಆಡಂಬರಗಳಲ್ಲಿ ದುರ್ವಿನಿಯೋಗ ಮಾಡದೆ ಇತರರಿಗೆ ಉಪಯೋಗವಾಗುವ ದಾರಿಗಳಲ್ಲಿ ವೆಚ್ಚಮಾಡಬೇಕೆಂದು ನಾವೆಲ್ಲರೂ ಕಲಿಯಬೇಕಾಗಿದೆ. ಕವಿಯು ತನ್ನ ಆತ್ಮದ ಸಂಸ್ಕಾರವನ್ನು ಕುರಿತ ಗೀತಿಕೆಗಳನ್ನು ಬರೆಯುತ್ತಿರುವನಾದರೂ ಅವನು ಪ್ರತಿಪಾದಿಸುತ್ತಿರುವ ವಿಷಯಗಳು ಇವು. ಇವುಗಳನ್ನು ನಾವೆಲ್ಲರೂ ತಿಳಿಯಲೇ ಬೇಕು. ಅವನು ದೇಶದ ಔನ್ನತ್ಯಕ್ಕಾಗಿ

ಮಾಡಿರುವ ಪ್ರಾರ್ಥನೆಯೊಂದರಿಂದಲೇ ಆತನ ದೇಶವಾತ್ಸಲ್ಯವು ಎಷ್ಟು ಉದಾತ್ತವಾದುದು, ಎಷ್ಟು ನಿರ್ಮಲವಾದುದು, ಎಷ್ಟು ನಿಜವಾದುದು ಎಂದು ಎಲ್ಲರಿಗೂ ತೋರಬೇಕು. ಇದರ ಮೇಲೆ ಐಹಿಕ ಸಂಪತ್ತಿನ ಅನ್ವೇಷಣಕ್ಕೆ ಬೇಕಾದ ಉತ್ತೇಜನವು ಈ ಗ್ರಂಥದಿಂದ ಬರಲಿಲ್ಲವೆಂದರೆ ನಾವು ಕೇವಲ ಅತೃಪ್ತರಾಗಬಾರದು. ನವ ನಾಗರಿಕತೆಯ ಪ್ರಭಾವ ದಿಂದ ಐಶ್ವರ್ಯದಲ್ಲಿಯೂ ಅದರ ಅಂಗೋಪಾಂಗಗಳಲ್ಲಿಯೂ ನೆಟ್ಟ ಮನಸ್ಸನ್ನುಳ್ಳ ನಮಗೆ ಆತ್ಮ ಸಂಸ್ಕಾರದ ಮೌಲ್ಯವು ಎಷ್ಟೆಂದು ಅನೇಕ ವೇಳೆ ಮರೆಯಬಹುದು. ಆದರೆ ನಮ್ಮ ಪೂರ್ವಿಕರು ಆತ್ಮ ಸಂಸ್ಕಾರದ ಪಥದಲ್ಲಿ ಎಷ್ಟು ದೂರ ನಡೆದು ಎಷ್ಟು ಉನ್ನತವಾದ ಶ್ರೇಯಸ್ಸನ್ನು ಸಾಧಿಸಿದರೆಂಬುದನ್ನು ನೆನೆದೆವಾದರೆ ಕವಿಯು ಆತ್ಮ ಸಂಸ್ಕಾರಕ್ಕೆ ಕೊಡುವ ಪ್ರಾಮುಖ್ಯವನ್ನು ನಾವು ಒಂದು ದೋಷವೆಂದು ಎಣಿಸ ಲಾರೆವು. ಅದಕ್ಕೆ ಬದಲಾಗಿ ಐಶ್ವರ್ಯಕ್ಕೆಂದು ತವಕಪಡುತ್ತಿರುವ ನವೀನ ಭಾರತವರ್ಷಕ್ಕೆ, ಸಂಸಾರದ ನಡವಳಿಕೆಗಳನ್ನು ಅನುಕರಿ ಸುತ್ತಿರುವ ಮಗುವಿಗೆ ವರ್ಡ್ಸ್‌ವರ್ತ್ ಕವಿಯು ಹೇಳಿರುವಂತೆ, ಹೀಗೆಂದು ಹೇಳುವೆವು:—

Why dost thou provoke
The years to bring the inevitable yoke?
Thus blindly with thy blessedness at strife?
Full soon thy soul shall have her earthly freight
And custom lie upon thee with a weight
Heavy as frost and deep almost as life.

ಇವುಗಳಲ್ಲದೆ ಇನ್ನು ಒಂದು ಆಕ್ಷೇಪವನ್ನು ಈ ಗ್ರಂಥದ ವಿಷಯ ದಲ್ಲಿ ನಮ್ಮ ಜನರಲ್ಲಿ ಕೆಲವರು ಹೇಳಬಹುದು. ಪ್ರಪಂಚದ ಸುಖ ಸೌಂದರ್ಯಗಳಲ್ಲಿ ಕವಿಯು ತೋರಿಸಿರುವ ಉತ್ಸಾಹವು ಉತ್ತಮ ಮಾನಸರಿಗೆ ತಕ್ಕುದಲ್ಲವೆಂಬುದೇ ಈ ಆಕ್ಷೇಪ. ನಮ್ಮ ಸೀಮೆಯಲ್ಲಿ ನಮ್ಮ ವೇದಾಂತದ ಕೆಲವು ಭಾವಗಳು ವಿಸ್ತಾರವಾಗಿ ಪ್ರಚುರ ಗೊಂಡು ಅವುಗಳ ಅರ್ಥವು ಅಷ್ಟು ಸ್ಪಷ್ಟವಾಗಿ ತಿಳಿಯದೆ ಇರುವುದ ರಿಂದ, ನಮ್ಮ ಜನರಲ್ಲಿ ಸುಖವನ್ನು ಕೊಡುವ ಎಲ್ಲ ವಿಷಯಗಳಲ್ಲೂ

ಒಂದು ಅವಿಶ್ವಾಸವು ಹುಟ್ಟಿದೆ. ಮನುಷ್ಯನಿಗೆ ಕೆಲವು ದುಷ್ಕಾರ್ಯ ಗಳಿಂದ ಕ್ಷಣಿಕವಾದ ಸುಖವು ತೋರುವುದೆಂದು ಎಲ್ಲರೂ ಬಲ್ಲರು. ಸುಖವನ್ನು ಅಪೇಕ್ಷಿಸುವುದರಲ್ಲಿ ಜನರು ಇಂತಹ ದುಷ್ಕಾರ್ಯಗಳನ್ನು ಮಾಡುವರೆಂದು ಎಲ್ಲರೂ ಬಲ್ಲರು. ಇದರಿಂದ ಸುಖವೆನ್ನುವುದಕ್ಕೆಲ್ಲ ಒಂದು ಅಗೌರವವುಂಟಾಗಿದೆ. ಸುಖವನ್ನು ಕೊಡತಕ್ಕದ್ದೆಲ್ಲವೂ ಕೆಟ್ಟ ದ್ದಾಗಿರಬೇಕೆಂದೂ ಒಳ್ಳೆಯುದಾದದ್ದು ಕಷ್ಟವನ್ನು ಕೊಡಬಹುದೇ ಹೊರತು ಸುಖವನ್ನು ತರಲಾರದೆಂದೂ ನಮ್ಮ ಮನಸ್ಸಿನಲ್ಲೆಲ್ಲ ಒಂದು ಅಸ್ಪಷ್ಟವಾದ ಭಾವನೆಯು ಇರುವುದು. ಪದಾರ್ಥಗಳ ಗುಣಾವಗುಣ ಗಳನ್ನು ತಿಳಿದವೆನ್ನುವವರು ಕಾಯಿಲೆ, ಬಿದ್ದವರಿಗೆ ಬೇವು, ಹಾಗಲ ಕಾಯಿ ಮೊದಲಾದ ಎಲ್ಲ ಕಹಿ ಪದಾರ್ಥಗಳೂ ಮೈಗೆ ಒಳ್ಳೆಯವೆಂದು ಹೇಳುವುದನ್ನು ಕೇಳಿರುವೆವು. ರುಚಿಯಾದ ಪದಾರ್ಥ ರೋಗಿಯ ಮೈಗೆ ಒಳ್ಳೆಯುದಲ್ಲವೆಂದೂ ಇಂಥವರು ಹೇಳುವರು. ಮೇಲೆ ಉಕ್ತವಾದ ಕಷ್ಟಸುಖಗಳನ್ನು ಕುರಿತ ಭಾವನೆಯು ಜನಸಾಮಾನ್ಯದ ಈ ರೀತಿಯ ಶಿಥಿಲ ತರ್ಕದ ಫಲವೆಂದು ಹೇಳಬಹುದು. ಪ್ರಪಂಚದಲ್ಲಿ ಸುಖ ಸೌಂದರ್ಯ ಎಂದು ನಾವು ಹೇಳತಕ್ಕುವು ಕೆಲವು ವೇಳೆ ಮನುಷ್ಯನನ್ನು ಕೆಟ್ಟ ದಾರಿಗೆ ಸೆಳೆದಂತೆ ತೋರಿದರೂ ಅದು ಅವುಗಳಲ್ಲಿ ಸ್ವಭಾವ ಜನ್ಯ ವಾದ ದೋಷವೆಂದು ಎಣಿಸಲಾಗದು. ಸುಖವೂ ಸೌಂದರ್ಯವೂ ನಮ್ಮ ಜೀವನದಲ್ಲಿ ಬರಬೇಕಾಗಿರುವ ಯಾವುದೋ ಒಂದು ಸಂಸ್ಕಾರ ವನ್ನು ತರುವ ಸಲುವಾಗಿ ಈ ಪ್ರಪಂಚದಲ್ಲಿ ಪರಮಾತ್ಮನಿಂದ ಇರಿಸಲ್ಪ ಟ್ಟಿವೆ. ಸುಖದ ಸಂಪಾದನೆಗಾಗಿ ಮನುಷ್ಯನು ಒಮ್ಮೊಮ್ಮೆ ತಪ್ಪು ದಾರಿಯಲ್ಲಿ ಬೀಳಬಹುದು. ತಪ್ಪಿಗೆ ಹೋಗದಂತೆ ತಡೆಯಲು ಅವನಿಗೆ ಶಕ್ತಿಯಿಲ್ಲದೆ ಹೋಗಬಹುದು. ಆದರೆ ತಾಯ ಹತ್ತಿರ ಹೋಗಲು ಪ್ರಯತ್ನಪಟ್ಟು ಇನ್ನೂ ಕಾಲು ಬರದಿರುವ ಮಗು ಹೇಗೆ ಬೀಳ ಬಹುದೋ ಹಾಗೆಯೇ ಇದೂ ಎಂದು ಎಣಿಸಬೇಕು. ಮಗು ಬಿದ್ದದ್ದ ರಿಂದ ತಾಯಿಯೆನ್ನುವಳು ಇರುವುದು ತಪ್ಪು ಎಂದು ತರ್ಕಿಸುವುದು ಸಮಂಜಸವಲ್ಲ. ಮಗುವಿಗೆ ನಡೆಯು ಸರಿಯಾಗಿ ಬಂದಮೇಲೆ ಅದು ಬೀಳದಂತೆಯೇ ತಾಯನ್ನು ಸೇರುವುದು. ಸೌಂದರ್ಯವೂ ಸೌಖ್ಯವೂ

ನಮಗೆ ಬೇಕಾದುವು. ಅವುಗಳ ಮೂಲಕ ನಾವು ಪರಮಾತ್ಮನನ್ನು
ಅರಿಯಬಹುದು. ತತ್ತ್ವವನ್ನು ಬುದ್ಧಿಯು ಅರಿಯುವುದು ಸಾವಕಾಶದ
ನ್ಯಾಸ. ಹಾಗೆ ಅರಿತರೂ ಆ ಅರಿವು ಆತ್ಮದಲ್ಲಿ ಸಿದ್ಧಿಸುವುದು ಕೇವಲ
ಕಷ್ಟಸಾಧ್ಯ. (ಸುಖ ಸೌಂದರ್ಯಗಳಾದರೋ ದೇವರು ಸರ್ವದಾ
ನಮಗೆ ತನ್ನ ಸಂಬಂಧವನ್ನು ತೋರಿಸುವುದಕ್ಕೋಸ್ಕರ ಪ್ರಪಂಚದಲ್ಲಿ
ಇರಿಸಿರುವ ಲಕ್ಷಣಗಳು.) ವೈರಾಗ್ಯ ಶಿಖಾಮಣಿಗಳಾದ ಸಂನ್ಯಾಸಿ
ಗಳೂ ದಾಸರೂ ಸುಖದ ಆಸೆಯಿಂದ ಜನರು ದುರ್ಮಾರ್ಗಕ್ಕೆ ಹೋಗ
ದಿರಲೆಂದು ಉದ್ದೇಶಿಸಿ ಸುಖವೇ ಮುಖ್ಯವಲ್ಲ, ಧರ್ಮವು ಮುಖ್ಯ,
ಸುಖಕ್ಕೆ ಮಾತ್ರ ಮನಸ್ಸನ್ನು ಕೊಡದೆ ಇರಿ, ಎಂದು ಒತ್ತಿ ಹೇಳುವುದು
ನಿಜವೇ ಆದರೂ ಅದರಿಂದ ಅವರು ಸುಖವನ್ನೆಲ್ಲ ತ್ಯಜಿಸಿ ಎಂದು ಹೇಳು
ವರೆಂದು ತಿಳಿಯಕೂಡದು. ಅವರು ಒಂದು ಕಡೆ ಕುಳಿತು ಪರಮಾತ್ಮ
ನನ್ನು ಧ್ಯಾನಮಾಡುವುದರಿಂದ ಅವರಿಗೆ ಒಂದು ಆನಂದ ಉಂಟು.
ಅದಕ್ಕೂ ದುರ್ಮಾರ್ಗದಲ್ಲಿ ಬರುವುದೆಂಬ ಸುಖ ಅಥವಾ ಆನಂದಕ್ಕೂ
ವ್ಯತ್ಯಾಸವು ಅದರ ಸಂಪಾದನೆಯ ರೀತಿಯಲ್ಲಿ ಮಾತ್ರ ಇರತಕ್ಕದ್ದು.
ಎಲ್ಲರೂ ಅಪೇಕ್ಷಿಸುವುದೂ ಆನಂದವನ್ನೇ; ಅದನ್ನು ಸರಿಯಾದ
ರೀತಿಯಲ್ಲಿ ಪಡೆಯಬೇಕು. ಆದುದರಿಂದ ವೇದಾಂತದ ನಿರಸನವು ಎಲ್ಲ
ಸೌಖ್ಯವನ್ನೂ ಕುರಿತದ್ದಲ್ಲ. ಸರಿಯಾದ ರೀತಿಯ ಸೌಖ್ಯವಾದರೆ
ಅದನ್ನು ಎಂತಹ ವೇದಾಂತಿಯೂ, ಎಂತಹ ಉತ್ತಮ ಮಾನವನೂ
ಅಪೇಕ್ಷಿಸಬಹುದು; ಅನುಭವಿಸಬಹುದು. ಆದ್ದರಿಂದ ಪ್ರಪಂಚದ
ಸುಖ ಸೌಂದರ್ಯಗಳ ನಿರೂಪಣವೂ ಶ್ಲಾಘನೆಯೂ ಕಾವ್ಯದಲ್ಲಿ ಒಂದು
ದೋಷವಲ್ಲ.

ಆಕ್ಷೇಪಮಾಡುವವರು ಇದಕ್ಕೆ ಇನ್ನೊಂದು ಮಾತನ್ನು ಹೇಳು
ವರು. ಭಗವಂತನ ಧ್ಯಾನದಿಂದ, ಅಥವಾ ವೈರಾಗ್ಯದಿಂದ, ಬರತಕ್ಕ
ಸೌಖ್ಯವು ನಿತ್ಯ ಸೌಖ್ಯ; ಇತರ ಸೌಖ್ಯಗಳು ಕ್ಷಣಿಕವಾದವುಗಳು
ನಿಮೇಷ ಮಾತ್ರ ಹೃದಯದಲ್ಲಿ ಉಲ್ಲಾಸವನ್ನುಂಟುಮಾಡಿ ಉತ್ತರ
ಕ್ಷಣದಲ್ಲಿ ಮರೆಯಾಗುವುವು ಎನ್ನುವರು. ಪರಮಾತ್ಮನ ವ್ಯಕ್ತ
ಸೌಂದರ್ಯವನ್ನು ತಿಳಿಯುವುದರಿಂದ ಬರುವ ಆನಂದವು ಎಷ್ಟೇ ಕ್ಷಣಿಕ

ವಾದರೂ ಪಡೆಯಬೇಕಾದ ಆನಂದ. ತತ್ತ್ವಜ್ಞಾನದಿಂದ ಆನಂದವನ್ನು ಪಡೆಯುವುದು ಯಾರಿಗೆ ಸಾಧ್ಯವೋ ಅವರು ಅದನ್ನು ಹಾಗೆಯೇ ಪಡೆಯಲಿ. ಈ ಸೌಂದರ್ಯ ದರ್ಶನದಿಂದ ಈ ಆನಂದವನ್ನು ಪಡೆಯಬಲ್ಲವರು ಈ ಮೂಲಕವೇ ಅದನ್ನು ಪಡೆಯಲಿ. ಈ ಸೌಂದರ್ಯ ದರ್ಶನದ ಆನಂದವು ಕ್ಷಣಿಕವೆನ್ನುವುದು ಕೂಡ ಪ್ರಾಯಶಃ ಸರಿಯಾದ ಮಾತಲ್ಲ. ಕ್ಷಣಿಕವೆ ಅಲ್ಲವೆ ಎಂಬುದನ್ನು ಅದನ್ನು ಅನುಭವಿಸಿದವರು ಮಾತ್ರ ಹೇಳುವುದು ಸಾಧ್ಯ. ವರ್ಡ್ಸ್‌ವರ್ತ್ ಕವಿಯು ಒಂದು ಸರೋವರ ತೀರದಲ್ಲಿ ಒಂದು ಸಲ ಡಾಫೊಡಿಲ್ ಪುಷ್ಪಗಳ ಮಡಿ ಒಂದನ್ನು ನೋಡಿ ಆನಂದಪಟ್ಟನಂತೆ; ಮತ್ತೆ ಹೋಗಿ ಅವುಗಳನ್ನು ನೋಡಲಿಲ್ಲ. ಆದರೆ ಅನೇಕ ಸಂದರ್ಭಗಳಲ್ಲಿ ಸುಂದರವಾದ ಸರೋವರದ ದಡದ ಆ ಡಾಫೊಡಿಲ್ ಪುಷ್ಪಗಳ ವ್ಯೂಹವು ಅವನ ಕಣ್ಣೆದುರಿಗೆ ಬಂದಂತೆ ಆಗಿ ಅದೇ ಸುಖವನ್ನು ಅವನು ಅನುಭವಿಸಿದನಂತೆ. ಅವನು

They flash upon that inward eye
Which is the bliss of solitude.

ಎಂದು ಹೇಳಿದನು. ಎಂದರೆ, ಶರೀರದ ಕಣ್ಣುಗಳಿಂದ ಒಂದು ಸಲ ನೋಡಿದ ಸೌಂದರ್ಯವು ಆ ಕ್ಷಣ ಮಾತ್ರಕ್ಕೆ ಸುಖವನ್ನು ಕೊಡುವುದಾದರೂ ಅದರ ಫಲವು ಅಲ್ಲಿಗೆ ಮುಗಿಯುವುದಿಲ್ಲ. ಮನಸ್ಸು ಅದರಿಂದ ಪಡೆಯುವ ಸಂಸ್ಕಾರವು ರೋಮಂಥದಿಂದ ಮತ್ತೆ ಮತ್ತೆ ಗುಣಿತವಾಗುವುದು. ಶಾರೀರಕ ಕೃತ್ಯವು ಕ್ಷಣಿಕವಾದದ್ದು; ಆದರೆ ನೆನವು ವಿಸ್ತಾರವಾದದ್ದು. ಇದರಿಂದ ಮನಸ್ಸಿಗೆ ಮತ್ತೆ ಆ ಸೌಂದರ್ಯ ದರ್ಶನದ ಫಲವು ಉಂಟಾಗುವುದು. ಈ ಸೌಂದರ್ಯಾತ್ಮಕವಾದ ಪ್ರಪಂಚದ ಮೂಲತತ್ತ್ವಕ್ಕೂ ಜೀವಾತ್ಮಕ್ಕೂ ಅಂಥ ಒಂದೊಂದು ದರ್ಶನವೂ ಅವಿಚ್ಛೇದ್ಯವಾದ ಒಂದು ಹೊಸ ಸಂಬಂಧವಾಗಿ ಪರಿಣಮಿಸುವುದು; ಎಂದರೆ, ಮುಖ್ಯವಾಗಿ ಸೌಂದರ್ಯ ದರ್ಶನದಿಂದ ಕ್ಷಣಿಕವಾದ ಉಲ್ಲಾಸವನ್ನು ಮಾತ್ರ ಪಡೆಯದೆ ಅದು ಪರವಸ್ತುವಿನೊಂದಿಗೆ ಬೆಳೆಯಿಸಿದ ಒಂದು ಹೊಸ ಸಂಬಂಧವೆಂದು ತಿಳಿದುಕೊಳ್ಳಬೇಕಾದದ್ದು ಮುಖ್ಯ. ಈ ರೀತಿ ತಿಳಿದುಕೊಳ್ಳುವ ಶಕ್ತಿಯುಳ್ಳ ಮನುಷ್ಯನಿಗೆ

(ವೇದಾಂತಿಯು ಕ್ಷಣಿಕವೆಂದು ಹೇಳುವ ಈ ಆನಂದವು ಕ್ಷಣಕ್ಷಣದಲ್ಲಿಯೂ ಬರುವುದು ಸಾಧ್ಯ. ಆದುದರಿಂದ ಈ ಸೌಖ್ಯವು ಪರಮಾತ್ಮನಿಗೂ ಜೀವಾತ್ಮನಿಗೂ ಬೆಳೆಯುವ ಸಂಬಂಧದ ನಿರರ್ಗಳವಾದ ಪ್ರವಾಹವಾಗುವುದು. ಸೌಂದರ್ಯವನ್ನು ನೋಡುವವನು ತನ್ನ ಚೇತನವನ್ನು ಪರಮಾತ್ಮನ ಪಾದಾರವಿಂದದಲ್ಲಿ ವಿಲಾಸವಾಗಿ ಒಪ್ಪಿಸಿಬಿಡುವನು. ವೇದಾಂತಿಗಳು ಇದು ನಿಜವೇ ಎಂದು ಸಂದೇಹ ಪಡಬಹುದು. ಆದರೆ ಈ ಸಂದೇಹಕ್ಕೆ ಕಾರಣವಿಲ್ಲ. ಕೇವಲ ಭಕ್ತಿ ಮಾರ್ಗದಲ್ಲಿ ನಂಬಿಕೆಯುಳ್ಳವರು ತತ್ತ್ವಜ್ಞಾನಿಗಳ ವಾದವನ್ನು ಬರಿಯ ಮಾತೆಂದು ಹೇಳುವುದುಂಟು. ಭಕ್ತರ ಈ ಆನಂದವನ್ನು ನಿಜವೇ ಎಂದು ವೇದಾಂತಿಗಳು ಪ್ರಶ್ನೆಮಾಡಿದರೆ ಇದರಂತೆಯೇ ಆಗುವುದು. ಕಾರ್ಲೈಲ್ ಎಂಬ ಗ್ರಂಥಕಾರನು ಒಂದು ಸಂದರ್ಭದಲ್ಲಿ ಸೂರ್ಯೋದಯವು ದಿನದಿನವೂ ನಡೆಯುವ ಅದ್ಭುತ ವ್ಯಾಪಾರವೆಂದೂ ಅದರ ಆಶ್ಚರ್ಯವನ್ನೆಲ್ಲ ಮನನ ಮಾಡಿದವನು ಪರಮಾತ್ಮನಿರುವನೇ ಎಂದು ಶಂಕಿಸುವುದಕ್ಕೆ ಆಗಲಾರದೆಂದೂ ಹೇಳಿದ್ದಾನೆ. ಸಾಮಾನ್ಯರಾದ ನಮಗೆ ಸೂರ್ಯನೂ ಚಂದ್ರನೂ ನಕ್ಷತ್ರಗಳೂ ಉದಯಿಸುವ ಮೊದಲು ಅಸ್ತಮಿಸುವವರೆಗೆ ನಡೆಯುವ ಎಲ್ಲ ವ್ಯಾಪಾರಗಳೂ ಬಹು ಸಾಮಾನ್ಯವಾಗಿ ಹೋಗಿವೆ. ಇವುಗಳು ಎಷ್ಟು ಅದ್ಭುತವಾದುವೆಂದೂ ಎಷ್ಟು ಆನಂದದಾಯಕವೆಂದೂ ನಮಗೆ ತಿಳಿಸಬಲ್ಲ ಕವಿಯು ತಿಳಿಸಿದನಾದರೆ ಅದು ಕಾವ್ಯದಲ್ಲಿ ದೊಡ್ಡ ಗುಣವೇ ಹೊರತು ದೋಷವಲ್ಲ.

ನಮ್ಮ ಜನರು ಈ ವಿವಿಧ ಆಕ್ಷೇಪಗಳನ್ನು ಹೇಳುತ್ತಿರುವಲ್ಲಿ ಪಾಶ್ಚಾತ್ಯರಲ್ಲಿ ಕೆಲವರು ಈ ಗೀತೆಗಳ ವಿಷಯದಲ್ಲಿ ಕೆಲವು ಅಭಿಪ್ರಾಯಗಳನ್ನು ಸೂಚಿಸಿದರು. ಅವುಗಳನ್ನೆಲ್ಲ ಇಲ್ಲಿ ಹೇಳಬೇಕಾದದ್ದಿಲ್ಲ. ಒಂದು ಮಾತ್ರ ಸ್ವಲ್ಪ ಚೋದ್ಯವಾದದ್ದು. ಠಾಕೂರರವರ ಮಾನವ ವಾತ್ಸಲ್ಯವನ್ನೂ ದೈನ್ಯಭಾವವನ್ನೂ ಅತಿಶಯ ದೈವಭಕ್ತಿಯನ್ನೂ ನೋಡಿ ಕೆಲವರು ಕವಿಯು ಈ ಗುಣಗಳನ್ನು ಕ್ರೈಸ್ತ ಮತದಿಂದ ಕಲಿತರೆಂದೂ, ಕ್ರೈಸ್ತ ಮತೀಯ ಕಾವ್ಯಗಳಿಂದ ಅನುಕರಣ ಮಾಡಿರುವರೆಂದೂ ಹೇಳಿದರು. ಈ ಉಪನ್ಯಾಸದಲ್ಲಿ ಅನುವಾದಿಸಲ್ಪಟ್ಟಿರುವ ಗೀತಾಂಜಲಿಯ ಭಾಗಗಳನ್ನು

Sincerity.
ಓದಿದ ನಮ್ಮ ದೇಶೀಯರೆಲ್ಲರೂ ಈ ಪಾಶ್ಚಾತ್ಯ ಅಭಿಪ್ರಾಯಕ್ಕೆ ತಳಹದಿ ಇಲ್ಲವೆಂಬುದನ್ನು ಸುಲಭವಾಗಿ ತಿಳಿದೇ ಇರುವರು. ಮಾನವ ವಾತ್ಸಲ್ಯವಾಗಲಿ, ಹೃದಯ ಸಾರಳ್ಯವಾಗಲಿ, ದೈವಭಕ್ತಿಯಾಗಲಿ ಉತ್ತಮವಾದ ಯಾವ ಮತದಲ್ಲಿ ಹುಟ್ಟಿ ಬೆಳೆದವರಿಗೂ ಹೊಸದಾಗಿರಲಾರದು. ಎಲ್ಲ ನಾಡುಗಳಲ್ಲೂ ಸಜ್ಜನರ ಮನಸ್ಸು ದೈವಭಕ್ತಿಯನ್ನೂ ಆ ಮೂಲಕ ಹೃದಯದ ದೀನತೆಯನ್ನೂ ಮಾನವ ವಾತ್ಸಲ್ಯವನ್ನೂ ಕಂಡುಹಿಡಿದು ಕೊಂಡಿದೆ. ಠಾಕೂರರವರಿಗೆ ಕ್ರೈಸ್ತಮತದ ವಿಷಯಗಳು ತೀರ ಅಪರಿಚಿತವಿಲ್ಲದಿದ್ದರೂ ಅವರು ತಮ್ಮ ಕಾವ್ಯದ ಈ ಮುಖ್ಯ ಲಕ್ಷಣಗಳನ್ನು ಕ್ರೈಸ್ತಮತದಿಂದ ಕಲಿಯಬೇಕಾದ ಪ್ರಮೇಯವೇನೂ ಇರಲಿಲ್ಲ. ಅವರು ಹಿಂದೂ ಮತದ ಸಂಪ್ರದಾಯದಲ್ಲಿ ಬೆಳೆದು ಚಿಕ್ಕಂದಿನಿಂದ ಉಪನಿಷದ್ವಾಕ್ಯಗಳನ್ನು ದಿನವೂ ಕೇಳುತ್ತಿದ್ದರು. ವೈಷ್ಣವ ಸಂಪ್ರದಾಯದ ದೇವರನಾಮಗಳನ್ನು ವಿಶೇಷವಾಗಿ ಕೇಳಿಬಲ್ಲರು. ಇವುಗಳಿಂದ ಬರುವ ದೈನ್ಯವನ್ನೂ ಮಾನವ ವಾತ್ಸಲ್ಯವನ್ನೂ ಯೌವನದಲ್ಲಿಯೇ ಪಡೆದರು. ಇವರ ಕಾವ್ಯಗಳಲ್ಲಿ ತೋರುವ ಈ ಲಕ್ಷಣಗಳು ಇವರಿಗೆ ಈ ಮೂಲಕವಾಗಿ ಬಂದುವು ಎಂದು ಹೇಳಬೇಕು. ಕ್ರೈಸ್ತರಾದವರು ಈ ಭಾವಗಳು ತಮಗೂ ತಿಳಿದಿರುವುವೆಂದು ಹೇಳುವುದಾದರೆ ಕ್ರೈಸ್ತಮತದಲ್ಲಿಯೂ ಉತ್ತಮವಾದ ಹಿಂದೂ ಮತದ ಈ ಲಕ್ಷಣಗಳು ಇರುವುದರಿಂದ ಹಾಗೆ ತೋರುವುದೆಂದು ಹೇಳಬೇಕು. ಠಾಕೂರರವರು ಕ್ರೈಸ್ತಮತದಿಂದ ಆ ಭಾವಗಳನ್ನು ಕಲಿತರೆನ್ನುವುದು ಒಪ್ಪಬಹುದಾದ ಮಾತಲ್ಲ.

ಗೀತಾಂಜಲೀ ಕಾವ್ಯದ ವಿಷಯವಾಗಿ ಇಷ್ಟು ಆಕ್ಷೇಪಗಳನ್ನು ಸೂಚಿಸಿ ಅವುಗಳಿಗೆ ಸಮಾಧಾನಗಳನ್ನು ಹೇಳುವುದು ಆವಶ್ಯಕವೇ ಎಂದು ಸಾಹಿತ್ಯ ಪಕ್ಷಪಾತಿಗಳು ಕೆಲವರು ಪ್ರಶ್ನೆಮಾಡಬಹುದು. ಸಾಹಿತ್ಯವು ಕಾಲಾನುಕ್ರಮವಾಗಿ ಸಂಪ್ರದಾಯವನ್ನು ಅನುಸರಿಸಿ ಸಜೀವವಾಗಿ ಬೆಳೆಯುತ್ತಿದ್ದರೆ ಇಂತಹ ಚರ್ಚೆಯು ಆವಶ್ಯಕವಾಗುವುದಿಲ್ಲ. ಸಾಹಿತ್ಯವು ಬೆಳೆದ ಹಾಗೆ ಅದರ ವಿಷಯದಲ್ಲಿ ಪ್ರಾಜ್ಞತೆಯೂ ಜನರಲ್ಲಿ ಹಬ್ಬುತ್ತ ಇದ್ದು ನವೀನವಾದ ಕೆಲ ಅಂಶಗಳು ಕಂಡು

ಬಂದರೂ ಅವುಗಳನ್ನು ಒಪ್ಪಿಕೊಳ್ಳುವ ಸಹನೆಯು ಜನರಲ್ಲಿ ಇರುವುದು. ಆದರೆ ನಮ್ಮಲ್ಲಿ ಸಾಹಿತ್ಯವು ಬೆಳೆಯುವುದು ಕೆಲವು ಶತಮಾನಗಳ ಹಿಂದೆ ನಿಂತುಹೋಯಿತು. ಬರೆದ ಗ್ರಂಥಗಳು ಹಿಂದಣ ಗ್ರಂಥಗಳಲ್ಲಿ ತೋರಿ ಬಂದ ಲಕ್ಷಣಗಳನ್ನು ವಿಚಾರದೆ ನಿರ್ಮಿಸಲ್ಪಟ್ಟುವು. ಕಾವ್ಯ ಪ್ರವಾಹವು ಕೆಲವು ಅಂಶಗಳಲ್ಲಿ ಸ್ವಾತಂತ್ರ್ಯವನ್ನು ಅನುಸರಿಸುವುದು ಅದರಲ್ಲಿ ಸಲ್ಲಕ್ಷಣವೆಂಬುದನ್ನು ನಾವು ಮರೆತೆವು. ಕವಿಯು ಜನಾಂಗವನ್ನು ಇದ್ದ ಕಡೆಯಲ್ಲಿಯೇ ನಿಲ್ಲಿಸುವವನಲ್ಲವೆಂಬುದನ್ನೂ ಅದರ ಜೀವನದಲ್ಲಿ ಯಾವ ಭಾಗವು ಕೃಶವಾಗಿದೆಯೊ ಉದ್ಧಾರವಾಗಬೇಕೊ ಆ ಭಾಗವನ್ನು ಪುಷ್ಟೀಕರಿಸಿ ವೃದ್ಧಿಗೊಳಿಸಿ ಆ ಜೀವನವನ್ನು ಸಂಪೂರ್ಣಮಾಡುವುದಕ್ಕೆ ಯತ್ನಿಸುವನೆಂಬುದನ್ನೂ ಮರೆತೆವು. ಮತ್ತೆ ಕವಿಯು ಬಂದು ಈ ಕಾರ್ಯವನ್ನು ನಡೆಯಿಸಿದಾಗ ಹೊಸ ರೀತಿ ಆಯಿತೆಂದು ಆಕ್ಷೇಪಿಸುವ ಸ್ಥಿತಿಗೆ ಬಂದೆವು. ಇದರಿಂದಲೇ ಠಾಕೂರರವರ ಗೀತಾಂಜಲಿಯ ವಿಷಯದಲ್ಲಿ ಮೇಲೆ ಸೂಚಿಸಿರುವ ಆಕ್ಷೇಪಗಳನ್ನು ನಮ್ಮ ವಿಮರ್ಶಕರು ಮುಂದಕ್ಕೆತಂದದ್ದು. ಕಾವ್ಯದ ನಿಜವಾದ ಸ್ವಭಾವವು ಮುಂದಕ್ಕೆ ಮತ್ತೆ ನಮ್ಮ ಜನರಿಗೆ ತಿಳಿಯಬಹುದು. ಆವರೆಗೆ ಈ ರೀತಿಯ ಚರ್ಚೆಯು ಆವಶ್ಯಕವಾಗುತ್ತದೆ.

ಗೀತಾಂಜಲೀ ಕಾವ್ಯವು ವೈಷ್ಣವ ಸಂಪ್ರದಾಯದಲ್ಲಿ ಹಿಂದಣ ದಾಸರು ಬರೆದ ಗೀತೆಗಳ ಮಾರ್ಗದಲ್ಲಿ ಒಂದು ಹೊಸ ರೂಪ. ಒಂದೊಂದು ಆತ್ಮವೂ ಭಗವಂತನನ್ನು ಒಂದೊಂದು ರೀತಿಯಲ್ಲಿ ಅನುಭವಿಸುತ್ತಲಿದೆ. ಆ ರೀತಿಯು ಆಯಾ ಆತ್ಮದ ಸಂಸ್ಕಾರವನ್ನು ಅನುಸರಿಸಿದ್ದು. ಏಟ್ಸ ಕವಿಯು ಗೀತಾಂಜಲಿಗೆ ಬರೆದ ಉಪೋದ್ಘಾತದಲ್ಲಿ ಈ ಕಾವ್ಯವು ಬಹು ಉತ್ತಮತರದ ಸಂಪ್ರದಾಯವನ್ನನುಸರಿಸಿ ಬರೆದಂತೆ ತೋರುವುದೆಂದೂ ಇದರಲ್ಲಿ ರಸಜ್ಞತೆಯೂ ದೈವಭಕ್ತಿಯೂ ರಾಗಸೌಲಭ್ಯವೂ ಈ ಕಾರಣದಿಂದ ಸ್ವಭಾವಜನ್ಯವಾಗಿ ಮಿಳಿತವಾಗಿ ತೋರುವುದೆಂದೂ ಸಾಮಾನ್ಯ ಜೀವನದ ಸಾಮಾನ್ಯ ನಡೆವಳಿಕೆಗಳಲ್ಲಿ ಪರವಸ್ತುವಿನೊಂದಿಗೆ ಸಂಬಂಧವನ್ನು ಬೆಳೆಯಿಸುವ ಸಮಯಗಳಾಗಿರುವುವೆಂದೂ ಬಹಳ ಉತ್ಸಾಹದಿಂದ ಕೊಂಡಾಡಿದನು. ಈಗ ನಮ್ಮ

ಜನರಿಗೆ ಮತ್ತೆ ಬೇಕಾಗಿರುವುದು ಗೀತಾಂಜಲೀ ಕಾವ್ಯದಲ್ಲಿ ಸೂಚಿತ ವಾಗಿರುವ ಜೀವನ ಮಾರ್ಗ. ಪೂರ್ವದ ಒಂದು ಅಚ್ಚಿನಲ್ಲಿ ಬೆಳೆವಣಿಗೆಯ ಲಕ್ಷಣವನ್ನೇ ಮರೆತು ನಿರ್ಜೀವವಾಗಿ ನಡೆದುಬರುತ್ತಿರುವ ನಮ್ಮ ಜೀವನವು ಕೇವಲ ಬೆಂಡಾಗಿದೆ. ದೇವರು ಹೃದಯದಿಂದ ಅರಿಯಲು ಸಾಧ್ಯನೆಂಬುದನ್ನು ನಾವು ಮರೆತಿದ್ದೇವೆ. ನಿಶ್ಚಲವಾದ ಅಪೇಕ್ಷೆ ಯಿಂದ ಯತ್ನಮಾಡಿದರೆ ಎಂತಹ ಕನಿಷ್ಠ ಜೀವಕ್ಕೂ ಅವನು ಲಭ್ಯ ನೆಂಬುದನ್ನು ಮರೆತಿದ್ದೇವೆ. ಜೀವರು ಅವನನ್ನು ಪಡೆಯಲು ಸಾಧ್ಯ ವಾಗಲೆಂದು ಆಯಾ ಜೀವದ ಶಕ್ತಿಗನುಸಾರವಾಗಿ ರೂಪನ್ನು ತಳೆದು ಅವನು ನಮ್ಮ ಸುತ್ತ ಪ್ರತ್ಯಕ್ಷನಾಗಿರುವನೆಂಬುದನ್ನು ನಾವು ತಿಳಿಯೆವು. ವೇದಾಂತವು ಶುಷ್ಕವಾದವಾಗಿ ಹೋಗಿದೆ. ಅದರ ಚರಮ ಫಲವು ಸರ್ವಸಂಗತ್ಯಾಗವಾಗಿದೆ. ನಮ್ಮ ಜೀವನ ಉಳಿಯಬೇಕಾದರೆ ಇದೆಲ್ಲ ಮಾರ್ಪಡಬೇಕು. ನಾವು ಮತ್ತೆ ಭಕ್ತ ಸಂಪ್ರದಾಯದ ಭಕ್ತಿಯನ್ನು ನಮ್ಮ ಜೀವನದಲ್ಲಿ ಅನುಷ್ಠಾನ ಮಾಡಿದರೆಯೇ ಸಜೀವರಾಗಬಹುದು. ಇದಕ್ಕೆ ಗೀತಾಂಜಲಿಯ ಮಾರ್ಗವನ್ನನುಸರಿಸುವುದು ಬಹಳ ಆವಶ್ಯಕ. ಜನಾಂಗವು ಸಜೀವವಾದರೆ ಇದೇ ಸಂಪ್ರದಾಯದಲ್ಲಿ ಇನ್ನೂ ಇಂತಹ ಕಾವ್ಯಗಳು ಬರುವುವು. ಅವುಗಳಲ್ಲಿ ಇನ್ನೂ ಹೊಸ ಲಕ್ಷಣಗಳು ಕಾಣ ಬಹುದು. ಆಗ್ಗೆ ನಾವು ಅವುಗಳನ್ನೂ ತಿಳಿಯುವುದು ಸಾಧ್ಯವಾಗು ವುದು. ಸದ್ಯದಲ್ಲಿ ಗೀತಾಂಜಲಿಯು ಎಷ್ಟು ಉತ್ತಮವಾದ ಕಾವ್ಯ ವೆಂಬುದನ್ನು ಗ್ರಹಿಸಿ ಅದರ ಉತ್ತಮ ಭಾವಗಳನ್ನು ಸಾಧ್ಯವಾದಷ್ಟು ಮಟ್ಟಿಗೆ ಸಾಧಿಸುವುದಕ್ಕೆ ಪ್ರಯತ್ನಿಸಿದೆವಾದರೆ ಆ ಕಾವ್ಯದಲ್ಲಿ ಉಕ್ತ ವಾಗಿರುವ ಮಾನವ ವಾತ್ಸಲ್ಯವೂ ರಾಗ ಸೌಲಭ್ಯವೂ ನಮ್ಮ ಜನಾಂಗ ದಲ್ಲಿ ವೃದ್ಧಿಯಾಗಿ ನಮ್ಮ ಶಕ್ತಿಯೆಲ್ಲ ದೀನರನ್ನು ರಕ್ಷಿಸುವುದೂ, ಸಹಾಯಶೂನ್ಯರಿಗೆ ಸಹಾಯ ಮಾಡುವುದೂ, ಸತ್ಯವನ್ನು ತಿಳಿದು ಆಚರಿಸುವುದೂ ಪ್ರಪಂಚದ ಕಾರ್ಯವನ್ನು ನಮ್ಮ ಯೋಗ್ಯತೆಗೆ ಕಡಿಮೆಯಾದುದೆಂದೆನ್ನದೆ ಉತ್ಸಾಹದಿಂದ ಮಾಡಲು ತೊಡಗುವುದೂ ಮೊದಲಾದ ನಾನಾ ರೂಪಗಳಲ್ಲಿ ಸಾರ್ಥಕವಾಗಿ ಜನದ ಜೀವನವು ಅತ್ಯುತ್ತಮ ಸ್ಥಿತಿಗೆ ಬರುವುದೆನ್ನುವುದರಲ್ಲಿ ಸಂದೇಹವಿಲ್ಲ. 21 Dec

# ಹಾಫೀಸ್ ಕವಿಯನ್ನು ಕುರಿತು

೧

ಏಷ್ಯಾ ಖಂಡದ ಪೂರ್ವದ ಪ್ರಸಿದ್ಧ ಕವಿಗಳಲ್ಲಿ ಪರ್ಷಿಯಾ ದೇಶದ ಹಾಫೀಸ್ ಕವಿ ಒಬ್ಬನು. ಪಾರ್ಷಿ ಭಾಷೆಯಲ್ಲಿ ಇವನ ಕವನವು ಇವನಿಗೆ ಅಗ್ರಸ್ಥಾನವನ್ನು ಕೊಟ್ಟಿದೆ. ನಮ್ಮ ಹಿಂದುಸ್ಥಾನಿ ಗಾಯಕರು ಆಗಾಗ ಇವನ ಗೀತೆಗಳನ್ನು ಹಾಡುವುದುಂಟು. ಅಂಥ ಸಂದರ್ಭದಲ್ಲಿ ಗಾನದ ಮಾಧುರ್ಯದಲ್ಲಿ ಕವಿಯ ಅರ್ಥವು ಒಂದು ಕಡೆಗೆ ನಿಲ್ಲುತ್ತದೆ. ಆದರೆ ಕವಿಯು ಅರ್ಥವನ್ನು ಮುಖ್ಯವೆಂದು ಎಣಿಸಿಯೇ ಬರೆದನು. ಭಾಷೆಯ ಪರಿಚಯವಿಲ್ಲದವರು ಕೇಳುವುದರಿಂದಲೂ ಗಾನದಲ್ಲಿ ಅರ್ಥವು ಮರೆಯಾಗುವುದರಿಂದಲೂ ಕವಿಯ ಭಾವದ ಉತ್ಕೃಷ್ಟತೆಯು ನಮ್ಮ ಜನರಿಗೆ ತಿಳಿಯುವುದಕ್ಕೆ ಅವಕಾಶವಿಲ್ಲದೆ ಇದೆ. ಅನೇಕರು ಇವನ ಹೆಸರನ್ನೇ ಅರಿಯರು. ಪಾಶ್ಚಾತ್ಯ ದೇಶಗಳ ಪಂಡಿತರು ಪಾರ್ಷಿ ಭಾಷೆಯನ್ನು ಕಲಿತವರು ಇವನ ಕಾವ್ಯದ ಸೊಗಸನ್ನು ನೋಡಿ ಬೆರಗಾಗಿ, ಅದನ್ನು ಯುರೋಪಿನ ಹಲವು ಭಾಷೆಗಳಿಗೆ ಭಾಷಾಂತರ ಮಾಡಿದ್ದಾರೆ. ಇವನ ಗೀತೆಗಳನ್ನೋದಿ ಗಯಟೆ ಕವಿಯು ಅದೇ ರೀತಿಯ ಗೀತೆಗಳ ಗ್ರಂಥ ಒಂದನ್ನು ತಾನೂ ರಚಿಸಿದನು. ಭಾಷಾಂತರಗಳನ್ನು ನೋಡಿದರೆಯೇ ಹಾಫೀಸಿನ ಕವಿತಾ ಶಕ್ತಿಯು ಎಷ್ಟು ಅದ್ಭುತವಾದುದು, ಅವನ ಭಾವನೆಯು ಎಷ್ಟು ಅಗಾಧವಾದುದು ಎಂದು ಆಶ್ಚರ್ಯವಾಗುತ್ತದೆ. ನಮ್ಮ ಜನರಿಗೆ ಈತನ ಪರಿಚಯವು ಸ್ವಲ್ಪಮಟ್ಟಿಗೆ ಉಂಟಾಗಲೆಂದು ಇವನ ಕಾವ್ಯದ ಇಂಗ್ಲಿಷ್ ಭಾಷಾಂತರ ಒಂದರಿಂದ ಕೆಲವು ಭಾಗಗಳನ್ನು ತೆಗೆದು ಈ ಉಪನ್ಯಾಸವನ್ನು ಬರೆದಿದೆ.

ಇತರ ದೇಶದ ಕವಿಯೊಬ್ಬನನ್ನು ಕುರಿತ ಈ ಜಿಜ್ಞಾಸವನ್ನು ನೋಡುವಲ್ಲಿ ಕೆಲವರಿಗೆ ಮೊದಲು ನಮ್ಮ ದೇಶದ ಕವಿಗಳ ವಿಷಯವನ್ನು ಯೋಚಿಸುವುದು ಅವಶ್ಯಕವಲ್ಲವೇ ಎಂದು ತೋರಬಹುದು. ಇದು ನಿಜ. ಆದರೆ ಇತರ ದೇಶಗಳ ಉತ್ತಮ ವರ್ಗದ ಕವಿಗಳ ವಿಷಯ

ವನ್ನು ಸಾಧ್ಯವಾದ ಹಾಗೆ ತಿಳಿದುಕೊಳ್ಳುತ್ತಾ ಬರುವುದೂ ಅವಶ್ಯಕವು. ಆಯಾಯ ಜನಾಂಗವು ತನ್ನ ಕವಿಗಳಿಂದಲೇ ತನ್ನ ಭಾವವನ್ನು ವ್ಯಕ್ತಗೊಳಿಸುವುದು ತನ್ನ ಮಾರ್ಗದಲ್ಲಿ ಮುಂದುವರಿಯುವುದು ಸಾಮಾನ್ಯವಾಗಿ ಸಾಧ್ಯವೆನ್ನಬಹುದು. ಆದರೆ ಮುಂದುವರಿಯುವ ಶಕ್ತಿಯು ಒಂದೊಂದು ಕಡೆಯಲ್ಲಿಯೂ ಮತ್ತೆ ಮತ್ತೆ ಒಂದೇ ರೀತಿಯಾಗಿ ಅವಶ್ಯಕಬಿದ್ದಾಗಲೆಲ್ಲಾ ತಪ್ಪದೆ ಬರುವುದೆಂದು ಹೇಳುವುದಕ್ಕಾಗುವುದಿಲ್ಲ. ವಿಶ್ವ ಸಂಸಾರದಲ್ಲಿ ಒಂದೊಂದು ದೇಶವೂ ಒಂದೊಂದು ವ್ಯಕ್ತಿಯಂತೆ. ಒಂದೊಂದು ಕಾಲದಲ್ಲಿ ಸಂಸಾರದ ಭರಣಶಕ್ತಿಯು ಬೇರೆ ಬೇರೆ ದೇಶದಲ್ಲಿ ತೋರಬಹುದು. ಆಗ ಇತರ ದೇಶಗಳು ತಮ್ಮ ಜೀವನವನ್ನು ಆ ದೇಶದ ಜೀವನದಿಂದ ಪೋಷಿಸಿಕೊಳ್ಳಬೇಕು. ಈ ಕಾರಣದಿಂದ ಒಂದೊಂದು ಜನಾಂಗವು ಇತರ ಜನಾಂಗಗಳ ಉತ್ತಮ ಕಾವ್ಯಗಳನ್ನು ಪಠಿಸುವುದು ಅವಶ್ಯಕ. ಭಾವವ್ಯಂಜನ ಮತ್ತು ಪುರೋಭಿವೃದ್ಧಿಯಲ್ಲಿ ಸಹಾಯ ಇವುಗಳಿಗಾಗಿ ಅಲ್ಲದೆ ಇನ್ನೊಂದು ಕಾರಣದಿಂದ ನಾವು ಇತರ ಸಾಹಿತ್ಯಗಳನ್ನು ನೋಡಬೇಕಾಗುತ್ತದೆ. ಮಾನವವರ್ಗದ ಚರಿತ್ರೆಯೆಲ್ಲವೂ ಒಂದು. ಒಂದೊಂದು ಭಾಗದ ಜನವು ಒಂದೊಂದು ವಿಧದಲ್ಲಿ ಆ ಚರಿತ್ರೆಯ ಕಟ್ಟಡವನ್ನು ಎಬ್ಬಿಸುತ್ತ ಬರುತ್ತಿದೆ. ಕಟ್ಟಡವು ಚೆನ್ನಾಗಿರಬೇಕಾದರೆ ಒಂದು ಭಾಗವು ಇನ್ನೊಂದು ಭಾಗದ ಕಾರ್ಯದ ರೀತಿಯನ್ನು ಅರಿತು, ತನ್ನ ಕಾರ್ಯವನ್ನು ಅದರ ಕಾರ್ಯದೊಡನೆ ಕಲೆಯುವಂತೆ ತಿದ್ದಬೇಕಾಗಿದೆ. ಈ ಕಾರಣದಿಂದ ಯಾವ ದೇಶವಾದರೂ ಇತರ ದೇಶದ ಕವಿಗಳಿಂದ ಕಲಿಯಬೇಕಾದ ವಿಷಯವು ಇದ್ದೇ ಇರುವುದು. ಕಾವ್ಯದ ಮೂಲವನ್ನೇ ಓದುವುದು ಸಾಧ್ಯವಾದರೆ ಒಳ್ಳೆಯದೇ ಆಯಿತು. ಹಾಗೆ ಓದುವುದಕ್ಕೆ ಆಗದಿದ್ದರೆ ಭಾಷಾಂತರವನ್ನಾದರೂ ಓದಬೇಕು. ಹೀಗೆ ಬೇರೆ ದೇಶಗಳ ಕಾವ್ಯದ ರಸವನ್ನು ಸ್ವಲ್ಪಮಟ್ಟಿಗಾದರೂ ಗ್ರಹಿಸಿ ಅದರಿಂದ ಬರಬಹುದಾದ ಸಂಸ್ಕಾರವನ್ನು ಪಡೆಯುವುದಕ್ಕೆ ಪ್ರಯತ್ನಪಡುವುದು ಎಲ್ಲ ಜನಾಂಗಗಳ ಕರ್ತವ್ಯವು.

ಹಾಫೀಸ್ ಕವಿಯು ಬರೆದ ಕಾವ್ಯಗಳು 'ದಿವಾನ್' ಎಂಬ ಗ್ರಂಥದಲ್ಲಿ ಅಡಕವಾಗಿವೆ. ಇವು ಬಹುಮಟ್ಟಿಗೆ ಮೇಲಣ ಅರ್ಥದಲ್ಲಿ

ಪ್ರಪಂಚದ ಸುಖಸೌಂದರ್ಯಗಳನ್ನು ರಸಯುಕ್ತವಾಗಿ ವರ್ಣಿಸತಕ್ಕವಾಗಿವೆ. ಅನೇಕವು ಪ್ರಿಯೆಗೆ ಹೇಳುವ ಗಜಲುಗಳು; ನಮ್ಮಲ್ಲಿ ಜಾವಡಿ ಎಂದು ಕರೆಯುವ ಗೀತೆಗಳ ತರಗತಿಗೆ ಸೇರಿವೆ. ಅನೇಕ ಕಡೆ ಇವನು ಸುರೆಯನ್ನು ಸ್ತೋತ್ರಮಾಡುತ್ತಾನೆ; ಪಾನಮಾಡುತ್ತಲೂ ಇದ್ದನೆಂದು ಕಾಣುತ್ತದೆ. ಬಹುಕಡೆ, ಜೀವನವು ಅಸ್ಥಿರ ಎಷ್ಟಾದರೆ ಅಷ್ಟು ಸುಖವನ್ನು ಅನುಭವಿಸು ಸತ್ತಮೇಲೆ ಏನೂ ಇಲ್ಲ ಎಂದು ಹೇಳುತ್ತಾನೆ. ಇದನ್ನು ನೋಡಿ ಇವನ ಕಾಲದ ತತ್ತ್ವಜ್ಞರು ಇವನನ್ನು ದುಷ್ಟಕವಿಯೆಂದು ದೂಷಿಸಿದರು. ಗೀತೆಗಳು ಜನರ ಆದರಕ್ಕೆ ಪಾತ್ರವಾದುದನ್ನು ಕಂಡು, ಅವುಗಳನ್ನು ಅಪಥ್ಯವೆಂದು ನಿಂದಿಸಿದರು. ಕೇವಲ ಚಾರ್ವಾಕ ವಾದವೇ ಕವಿಯ ತತ್ತ್ವವಾಗಿದ್ದರೆ ಅವನು ನಿಂದೆಗೆ ಅರ್ಹನೇ ಸರಿ. ಆದರೆ ಹಾಫೀಸ್ ಕವಿಯಲ್ಲಿ ಈ ಸುಖ ಸೌಂದರ್ಯದ ಲಾಲಸೆಯೊಂದಿಗೆ ಒಂದು ಗಂಭೀರಭಾವವು ಸೇರಿಕೊಂಡಿತ್ತು. ಕವಿಯು ನೀತಿಯನ್ನರಿಯದವನಲ್ಲ. ಆದರೂ ತಾನು ಮೊತ್ತದಲ್ಲಿ ಪರವಸ್ತುವಿನ ಕೃಪೆಗೆ ಬಾಹಿರನಾದಂತೆ ಅವನು ಎಣಿಸಲಿಲ್ಲ. ಉದಾತ್ತವಾದ ನೀತಿಗೆ ಅನುಸಾರವಾಗಿಯೇ ನಡೆದಿರುವೆನೆಂದು ಅವನು ತಿಳಿದುಕೊಂಡಿದ್ದನು. ಅವನು ಜೀವಂತನಾಗಿದ್ದಾಗ ಅವನ ರಸಲೋಲುಪ್ತಿಯನ್ನು ದೂಷಿಸಿದ ನೀತಿವಿದರು, ಅವನು ಸತ್ತಮೇಲೆ ಅವನ ಕಾವ್ಯಗಳ ಉತ್ಕೃಷ್ಟತೆಯನ್ನು ಕಂಡರು. ರಸವು ಪ್ರಮುಖವಾದರೆ ನೀತಿಗೆ ವಿರೋಧ ಎಂದೆಣಿಸಿ ಇವರು ಅವನ ಮಾತುಗಳಿಗೆ ಪರೋಕ್ಷಾರ್ಥವನ್ನು ಆರೋಪಿಸಿದರು; ಪ್ರಿಯೆಯನ್ನು ಕುರಿತ ಮಾತೆಲ್ಲಾ ಪರಮಾತ್ಮನನ್ನು ಕುರಿತದ್ದೆಂದು ಹೇಳಿದರು; ಕಾವ್ಯದಲ್ಲಿ ಸ್ತುತಿಸಲ್ಪಟ್ಟ ಸುರೆ ಎನ್ನುವುದು ಕುಡಿಯುವ ಮದ್ಯವಲ್ಲ, ಭಗವಂತನನ್ನು ಕುರಿತ ಭಕ್ತಿ ಎಂದು ನಿರ್ಧರಿಸಿದರು. ಹೀಗೆ ಮಾಡಿ ಕವಿಯ ಗಜಲುಗಳೆಲ್ಲ ದೈವಭಕ್ತಿಯನ್ನು ವರ್ಣಿಸುವ ಸ್ತೋತ್ರಗಳೆಂದೂ ಅವನು ಸೂಫಿ ತತ್ತ್ವಜ್ಞನೆಂದೂ ನಿರ್ಧಾರಮಾಡಿ ಇವರು ಅವನನ್ನು ಯೋಗ್ಯರ ಗುಂಪಿಗೆ ಸೇರಿಸಿಕೊಂಡರು. ಕಾವ್ಯದ ವಿಷಯದಲ್ಲಿ ಈ ರೀತಿ ನಡೆದುಕೊಳ್ಳುವುದು ಅಪೂರ್ವ ವಿಚಾರವೇನೂ ಅಲ್ಲ. ಇಹಜೀವನದ ಸುಖ

ಸಾಮಗ್ರಿಗಳು ಕೆಟ್ಟ ದಾರಿಗೆ ಎಳೆಯುವವೆಂಬ ಕಾರಣದಿಂದ ಈ ಸಾಮಗ್ರಿಗಳ ವಿಷಯದಲ್ಲಿಯೇ ಅಪನಂಬಿಕೆಪಡುವ ನೀತಿ ಪಕ್ಷಪಾತಿಗಳಲ್ಲೆಲ್ಲಾ ಈ ವರ್ತನೆಯು ಸಾಮಾನ್ಯವಾದದ್ದು. ಇಂಥವರಿಗೆ ಈಗಲೂ ಸೌಂದರ್ಯ ಪ್ರಮುಖವಾದ ಕಾವ್ಯವನ್ನು ಓದಿದರೆ ಅದರ ವಿಷಯದಲ್ಲಿ ಅಪನಂಬಿಕೆ ಬರುವುದು. ಅವರು 'ಕಾವ್ಯವು ಅಂದವಾಗಿರುವುದು ನಿಜ; ಮನಸ್ಸನ್ನು ಸೂರೆಗೊಳ್ಳುವುದು ನಿಜ; ಆದರೆ ಇದು ನೀತಿಗೆ ಸರಿಯಾದದ್ದೇ' ಎನ್ನುವರು. ಕಾವ್ಯಪಠನದಲ್ಲಿ ಇದು ಕುತ್ಸಿತವಾದ ಮಾರ್ಗ. ಇಂಥ ಸಂದೇಹದಿಂದ ಕಾವ್ಯಕ್ಕೆ ಪರೋಕ್ಷಾರ್ಥವನ್ನು ಕಲ್ಪಿಸುವುದು ಅತಿ ಚಮತ್ಕಾರ. ಕವಿಯು ಪರೋಕ್ಷಾರ್ಥವನ್ನು ಇಟ್ಟುಕೊಂಡಿರಬಹುದು. ಅರ್ಥವೆನ್ನುವುದು ಭಾವದ ಒಂದು ಭಾಗ ಮಾತ್ರ. ಹೇಳಿದ ಮಾತಿನಿಂದ ಮನಸ್ಸಿನ ಭಾವವೆಲ್ಲವೂ ಹೊರಬೀಳಲಾರದು. ಆದರೆ ನೀತಿಗೆ ವಿರೋಧವಾಗುವುದಲ್ಲಾ ಎಂಬ ಭಯದಿಂದ ಸೌಂದರ್ಯ ಪ್ರಮುಖವಾದ ಕಾವ್ಯವನ್ನು ಪರೋಕ್ಷಾರ್ಥ ಕಲ್ಪನೆಯ ಮೂಲಕ ವೇದಾಂತ ಗ್ರಂಥವಾಗಿ ಮಾಡಿಬಿಟ್ಟರೆ ಅದು ಕಾವ್ಯವೂ ಆಗಲಾರದು ವೇದಾಂತವೂ ಆಗಲಾರದು. ಭಾಗವತದ ವನವಿಹಾರದ ವರ್ಣನೆಯನ್ನು ವನವಿಹಾರವಾಗಿ ಎಣಿಸಿದರೆ ಅದು ಒಂದು ಉತ್ತಮ ಕಾವ್ಯ. ಕೃಷ್ಣನು ಊರ ಸ್ತ್ರೀಯರನ್ನೆಲ್ಲಾ ಮುಟ್ಟುವನಲ್ಲ, ಇದು ನೀತಿಗೆ ವಿರೋಧ, ಎಂದು ಗೋಪಿಕಾಸ್ತ್ರೀಯರು ಜೀವಾತ್ಮಗಳೆಂದೂ ಅವರು ಕೃಷ್ಣನನ್ನು ಹುಡುಕಿದ್ದು ಜೀವಾತ್ಮವು ಪರಮಾತ್ಮನನ್ನು ಹುಡುಕುವುದರ ವರ್ಣನೆ ಎಂದೂ ಹೇಳಿದೆವಾದರೆ ಕಾವ್ಯವು ತನ್ನ ಸ್ವಭಾವವನ್ನು ಕಳೆದುಕೊಂಡ ಹಾಗಾಯಿತು. ಜೀವಾತ್ಮವು ಪರಮಾತ್ಮನನ್ನು ಅಪೇಕ್ಷಿಸುವುದರಲ್ಲಿ ಹೊರಗಣ ಆ ಬೆಳದಿಂಗಳೇಕೆ, ಆ ಪುಳಿನರಾಶಿ ಏಕೆ, ಆ ಮಂದಗಾಮಿನಿಯಾದ ಯಮುನೆ ಏಕೆ, ಆ ತೀರದ ವನಗಳೇಕೆ? ಕವಿಯು ಕವಿಯಾಗಿರುವುದರಿಂದಲ್ಲೇ ಅವನಿಗೆ ವನವೂ ನದಿಯೂ ಪುಳಿನರಾಶಿಯೂ ಜ್ಯೋತ್ಸ್ನೆಯೂ ಪ್ರಮುಖವಾಗಿ ಕಂಡವು. ಅವನು ವೇದಾಂತವನ್ನು ಮಾತ್ರ ಹೇಳಬೇಕೆಂದಿದ್ದರೆ ವೇದಾಂತ ಗ್ರಂಥವನ್ನು ಬರೆಯುತ್ತಿದ್ದನು.

ಹೀಗೆಂದರೆ, ಅವನ ಮನಸ್ಸಿನಲ್ಲಿ ವೇದಾಂತ ಭಾವಗಳು ಇರಲಿಲ್ಲವೆಂದು ಅರ್ಥವಲ್ಲ. ಪ್ರಾಯಶಃ, ಅವು ಅವನ ಮನಸ್ಸಿನಲ್ಲಿ ಇದ್ದುವು; ಆದರೆ ಅವುಗಳನ್ನು ಅವನು ಈ ಸೌಂದರ್ಯ ಪ್ರಮುಖವಾದ ಕಾವ್ಯದಲ್ಲಿ ಹೇಳಿರುವುದರಿಂದ ಅವನ ಮಾತನ್ನು ಮೊದಲು ಕಾವ್ಯವಾಗಿ ತಿಳಿಯಬೇಕು. ಆಮೇಲೆ ಅದರ ತತ್ತ್ವವನ್ನು ಕುರಿತು ಯೋಚಿಸಬಹುದು. ಮಾತು ಮಾತಿಗೂ ತತ್ತ್ವದ ಅರ್ಥವನ್ನು ತರಲು ಯತ್ನಮಾಡಿದರೆ ಉತ್ತಮ ಕಾವ್ಯಕ್ಕೆ ಅಪಾರ್ಥವನ್ನು ಮಾಡಿದ ಹಾಗೆ ಮಾತ್ರ ಆಗುವುದು.

writing which explains the personal emotions of the poet when he wrote it.

ಹಾಫೀಸ್ ಕವಿಯ ಕಾವ್ಯವನ್ನು ಓದುವುದರಲ್ಲಿ ವ್ಯಂಜಕ ಕಾವ್ಯಗಳ ಸಮೂಹಕ್ಕೆಲ್ಲಾ ಅನ್ವಯಿಸುವ ಇನ್ನೊಂದು ವಿಷಯವನ್ನು ನಾವು ನೆನಪಿನಲ್ಲಿಟ್ಟಿರಬೇಕು. ಈ ರೀತಿಯ ಕಾವ್ಯದ ಒಂದೊಂದು ಪದ್ಯವೂ ಒಂದೊಂದು ಅವಸ್ಥೆಯನ್ನು ಮಾತ್ರ ಸೂಕ್ಷ್ಮವಾಗಿ ವಿವರಿಸುತ್ತದೆ. ಹತ್ತಾರು ಪದ್ಯಗಳನ್ನು ಬರೆದಿರುವ ಕವಿಯ ವಿಷಯದಲ್ಲಿ ಅವನ ಒಂದೇ ಪದ್ಯದಿಂದ ಒಂದು ನಿರ್ವಿವಾದವಾದ ಅಭಿಪ್ರಾಯವನ್ನು ಗ್ರಹಿಸುವುದು ಸಾಧ್ಯವಲ್ಲ. ಇಂಥ ಕವಿಯ ಅಭಿಪ್ರಾಯಗಳ ವಿಷಯವಾಗಿ ಸರಿಯಾದ ಭಾವನೆಯನ್ನು ಪಡೆಯಬೇಕಾದರೆ ಅವನ ಕಾವ್ಯವೆಲ್ಲವನ್ನೂ ಓದಿ ಒಟ್ಟಿನಲ್ಲಿ ತೋರಿಬರುವ ಸ್ವಭಾವವು ಎಂತಹದೆಂದು ನೋಡಬೇಕು. ಎಲ್ಲಾ ವ್ಯಂಜಕ ಕಾವ್ಯಗಳಿಗೂ ಅನ್ವಯಿಸುವ ಈ ಎಚ್ಚರವು ಹಾಫೀಸ್ ಕವಿಯ ಪದ್ಯಗಳಿಗೆ ಇನ್ನೂ ವಿಶೇಷವಾಗಿ ಅನ್ವಯಿಸುತ್ತದೆ. ಈತನ ಒಂದೊಂದು ಪದ್ಯಮಾಲೆಯಲ್ಲಿಯೂ ಒಂದು ಅವಸ್ಥೆ ಅಲ್ಲದೆ ಒಂದು ರಾಗದ ಬೆಳವಣಿಗೆಯಲ್ಲಿ ಮೊದಲಿಂದ ಕೊನೆಯವರೆಗೆ ತೋರಬಹುದಾದ ನಾಲ್ಕಾರು ಅವಸ್ಥೆಗಳೂ ರೂಪುಗೊಳ್ಳುತ್ತವೆ. ಇಂಥ ಸಂದರ್ಭದಲ್ಲಿ ಒಂದೊಂದು ಪದ್ಯವನ್ನು ಬರೆಯುವಾಗಲೂ ಕವಿಯು ಒಬ್ಬೊಬ್ಬ ಸ್ತ್ರೀಯನ್ನು ಕುರಿತು ಮುಗ್ಧನಾಗಿದ್ದನೆಂದು ಊಹಿಸುವುದು ಸರಿಯಲ್ಲ. ಕವಿಯು ಚಿತ್ರಿಸಿರುವ ಪ್ರಪಂಚವು ಬಹುಮಟ್ಟಿಗೆ ಭಾವನೆಯದು; ಸ್ವಲ್ಪಮಟ್ಟಿಗೆ ಹೊರಗಣದು. ಕವಿಯು ಪ್ರೇಮವನ್ನು ಬಲ್ಲನು. ಆದರೆ ಒಂದೊಂದು ಗಾನಕ್ಕೂ ಒಂದೊಂದು

Ideal

ಸಲ ಬೇರೆ ಬೇರೆ ಸಲ ಪ್ರೇಮಸಾಗರದಲ್ಲಿ ಮುಳುಗಿದ್ದನೆಂದು ಭಾವಿಸ ಕೂಡದು. ಒಮ್ಮೆ ಅನುಭವಿಸಿದ ವಿಷಯವನ್ನು ಕವಿಯು ಭಾವನೆಯಲ್ಲಿ ಮೆಲುಕುಹಾಕುತ್ತ ಮತ್ತೆ ಮತ್ತೆ ಅನುಭವಿಸಿ ಊಹೆಯಿಂದ ಅದಕ್ಕೆ ನವೀನ ವಿವರಗಳನ್ನು ಅನುವಾದಿಸಿ ಅದಕ್ಕೆ ಕಾವ್ಯದಲ್ಲಿ ಅನೇಕ ಸಲ ಸುಂದರವಾದ ರೂಪವನ್ನು ಕೊಡುವನು. ಹಾಫೀಸ್ ಕವಿಯ ಪ್ರಣಯ ಗೀತಗಳನ್ನು ಓದುವಾಗ ಈ ವಿಷಯವನ್ನು ನೆನಪಿನಲ್ಲಿಟ್ಟುಕೊಂಡರೆ ಅವನು ಸ್ವಚ್ಛಂದವೃತ್ತಿಯ ಪುರೋಹಿತನೆಂದು ಎಣಿಸುವ ತಪ್ಪನ್ನು ನಾವು ಮಾಡುವುದಿಲ್ಲ.

೨

ಹಾಫೀಸ್ ಕವಿಯ ಪದ್ಯಗಳು ರಸದಲ್ಲಿಯೂ ರಸವ್ಯಂಜನೆಯಲ್ಲಿಯೂ ವಿಲಾಸಯುಕ್ತವಾಗಿರುವುವು. ಒಬ್ಬ ತುರ್ಕಿಸ್ಥಾನದ ಸುಂದರಿಯನ್ನು ಕುರಿತು ಇವನು ಹೀಗೆಂದು ಹೇಳಿದನು:—

> “ಪ್ರಿಯೆ! ಓ ತುರ್ಕೀ ಸ್ತ್ರೀಯೇ! ಓ ದರೋಡೆಕಾರಿ! ಇಕೊ, ನನ್ನ ಹೃದಯ, ಕೊಡು ನಿನ್ನ ಕೈಯ;
>
> ಇದನ್ನು ಬದಲಿಗೆ ತೆಗೆದುಕೊಳ್ಳುವೆಯಾದರೆ ನಿನಗೆ ನಾನು ಬೊಖಾರಾವನ್ನು, ಬೇಕಾದರೆ ಸಾಮರಖಂಡವನ್ನು ಕೊಡುತ್ತೇನೆ.
>
> ಅಷ್ಟೇಕೆ, ನಿನ್ನ ಕೆನ್ನೆಯ ಮೇಲಣ ಒಂದು ಮಚ್ಚೆಗೆ ಇವೆರಡನ್ನೂ ಕೊಟ್ಟುಬಿಟ್ಟೇನು. ಇದು ಸಾಲದೆಂದರೆ ನನ್ನ ಜೀವವನ್ನೂ ದೇಹವನ್ನೂ ಸೇರಿಸಿಕೊಟ್ಟೇನು.”

ಇನ್ನೊಂದು ಕಡೆ ಪ್ರೇಯಸಿಯನ್ನು ನೋಡಿದಾಗ ಅವಳು ಹೇಗಿರುವಳೆಂಬುದನ್ನೂ, ತನ್ನ ಮನಸ್ಸಿನ ಭಾವವನ್ನೂ ಹೀಗೆಂದು ವರ್ಣಿಸಿದನು:—

> “ಪ್ರೇಯಸಿ, ಚಂದ್ರನ ಸೌಂದರ್ಯ ನಿನ್ನದಾಗಿದೆ;
> ನಿನ್ನ ಗಲ್ಲದಲ್ಲಿ ಒಂದು ನಕ್ಷತ್ರವು ಶೋಭಿಸುತ್ತದೆ;
> ಅದು ಅಂದವಾದ ಆ ನಿನ್ನ ಗಲ್ಲದ ಸುಳಿ;
> ನಿನ್ನನ್ನು ನೋಡಬೇಕೆಂದು ನನ್ನ ಜೀವವು ಎಷ್ಟು ಆಶಿಸುತ್ತದೆ,
> ಕಣ್ಣಿನ ಮೂಲಕ ಹೇಗೆ ಹಾರುತ್ತದೆ,
> ದೇಹದಲ್ಲಿ ಎಷ್ಟು ತವಕಪಡುತ್ತದೆ;

ನಿನ್ನ ಒಂದು ಮಾತನ್ನು ಕೇಳಬೇಕೆಂದು ಆಶಿಸಿ ನನ್ನ ಕಿವಿ
ನಡುಗುತ್ತದೆ.''

ಈ ವರ್ಣನೆಯು ಎಷ್ಟು ಸ್ವಭಾವಾನುಸಾರಿಯಾಗಿದೆ ಎಂದು ಹೇಳಬೇಕಾಗಿಲ್ಲ. ಹಾಫೀಸ್ ಕವಿಯ ಹೃದಯವು ಪೂರ್ವವಯಸ್ಸಿನ ಸರಳವಾದ ಪ್ರೇಮವನ್ನು ತಿಳಿದಿತ್ತು. ಇನ್ನೊಂದು ಕಡೆ ಪ್ರೇಯಸಿಯು ಪ್ರಾರ್ಥನೆಗಳಿಗೆ ಮನಗೊಡದೆ ಇರಲು ಇವನು ಹೀಗೆನ್ನುತ್ತಾನೆ:—

''ಪ್ರಿಯೆ, ನೀನು ಇಷ್ಟು ನಿರ್ದಯಳಾಗಿರುವುದಾದರೆ
ಇತರ ಹುಚ್ಚರು ಹೇಗೋ ಹಾಗೆ ನಾನು ಕಾಡಿಗೆ ಓಡುತ್ತೇನೆ;
ಪರ್ವತಗಳಲ್ಲಿ ಏಕಾಕಿಯಾಗಿ ಮನಸ್ಸನ್ನು ಮತದಿಂದ ತುಂಬಿ
ಕೊಂಡು ಮತದ ಹುಚ್ಚಿನಿಂದ ಕಂದಮೂಲಗಳನ್ನು ತಿನ್ನುತ್ತಾ ಇದ್ದು
ಬಿಡುತ್ತೇನೆ.''

ಇದೂ ಕೂಡ ಪೂರ್ವವಯಸ್ಸಿನ ಪ್ರೇಮ. ಪ್ರಿಯೆಯನ್ನು ಬೆದರಿಸಿ ಅವಳ ಪ್ರೇಮವನ್ನು ಸಂಪಾದಿಸಲು ಯತ್ನಮಾಡುವುದು ಆ ಪ್ರೇಮದ ಲಕ್ಷಣಗಳಲ್ಲಿ ಒಂದು. ಈ ಪ್ರಣಯೋನ್ಮತ್ತನು ಹೀಗಾದರೂ ಮತವನ್ನು ಕುರಿತು ಯೋಚಿಸುವನಷ್ಟೆ, ಒಳ್ಳೆಯದೇ ಆಯಿತು, ಎನ್ನುವದಾದರೆ ಇದಕ್ಕೂ ಅವಕಾಶವಿಲ್ಲ. ಏಕೆಂದರೆ ಈ ತಲೆಯನ್ನು ತಿರುಗಿಸುವ ಮತವು ಕವಿಯು ಮುಂದಣ ಪಙ್ಕ್ತಿಯಲ್ಲಿ ಹೇಳಿರುವಂತೆ ''ನಿನ್ನ ಮತ'' ಅಂದರೆ ಪ್ರೇಯಸಿಯನ್ನು ಕುರಿತು ಯೋಚಿಸುವ ಮತ.

ಇನ್ನೊಂದು ಕಡೆ ಪ್ರಿಯೆಯ ರೂಪವನ್ನು ವರ್ಣಿಸಿ ಅವಳು ಅಪ್ರಾಪ್ಯಳಾಗಿರುವುದರಿಂದ ಖಿನ್ನನಾಗಿ ಹೀಗೆನ್ನುತ್ತಾನೆ:—

''ಪ್ರಿಯೆ, ನಾನು ನಿನ್ನ ಮುಖವನ್ನು ನೋಡದೆಯೆ ಇದ್ದಿದ್ದರೆ!
ಆದರೇನು, ನಿನ್ನ ಮುಖವನ್ನು ನೋಡದೆಯೇ ಇದ್ದು....''

ಎಂದರೆ ಅವಳನ್ನು ನೋಡದೆಯೇ ಇದ್ದಿದ್ದರೆ ಅವಳನ್ನು ಅಪೇಕ್ಷಿಸುವ ಕಾತರತೆಯೂ ಅವಳು ಸಿಕ್ಕದಿರುವುದರ ಖೇದವೂ ಇಲ್ಲದೆ ಇರಬಹುದಾಗಿತ್ತು. ಆದರೇನು ಆ ಮುಖವನ್ನು ನೋಡುವುದೆನ್ನುವುದರ ಆನಂದೋತ್ಕರ್ಷವೂ ಇಲ್ಲದೇ ಹೋಗುತ್ತಿತ್ತು. ನೋಡಿ ಮುಂದಕ್ಕೆ

ಖೇದ; ನೋಡದೆ ಜೀವನದ ಒಂದು ಆನಂದವೇ ಇಲ್ಲ. ಏಕೆಂದರೆ ಇನ್ನೊಂದು ಕಡೆ ಕವಿಯು ವಸಂತಕಾಲವನ್ನು ವರ್ಣಿಸುವಲ್ಲಿ ಹೇಳಿರುವಂತೆ ಆ ಮುಖವು ಬಹು ಸುಂದರವಾದುದು.

"ಇಗೋ! ಕೇಳು, ಈ ಕೋಗಿಲೆ ಹೇಗೆ ಕೂಗುತ್ತದೆ!
ಗಾನದಲ್ಲಿ ಹೇಗೆ ಮರುಳಾಗಿದೆ!
ಇದು ಒಂದು ಕ್ಷಣಮಾತ್ರ ನಿನ್ನ ಮುಖವನ್ನು ಏನಾದರೂ ನೋಡಿತೊ!"

ಎಂದರೆ ಈ ಸುಂದರಿಯ ಮುಖವನ್ನು ನೋಡಿದರೆ ಕೋಗಿಲೆಯ ಆವೇಶವೂ ಕೂಡ ಒಂದು ಮೆರುಗನ್ನು ಪಡೆಯುವುದು. ಇನ್ನೊಂದು ಸಂದರ್ಭದಲ್ಲಿ, ಎಷ್ಟು ಬೇಡಿದರೂ ದಯೆತೋರದ ಪ್ರೇಯಸಿಯನ್ನು ಕವಿಯು ಹೀಗೆಂದು ಎಚ್ಚರಗೊಳಿಸುತ್ತಾನೆ:—

"ಓ! ದಯಾವಿಹೀನೆ, ಎಚ್ಚರಿಕೆ!
ನನ್ನ ಪ್ರಾರ್ಥನೆಯನ್ನು ದೇವರು ಕೇಳಿ, ನನ್ನ ಆಸೆಯನ್ನು ನೆರವೇರಿಸಿ, ನನಗೆ ಕಷ್ಟಕೊಟ್ಟದ್ದಕ್ಕಾಗಿ ನಿನ್ನನ್ನು ದಂಡಿಸಿದರೆ ಏನು ಮಾಡುವೆ?

ನನಗೆ ಅನ್ನ ನೆರಳುಗಳನ್ನು ಕೊಡದಹಾಗೆ ನನ್ನನ್ನು ಅಟ್ಟಿದೆಯಲ್ಲಾ; ನನ್ನ ಪಾಡೇನು! ಕತ್ತಲೋ ಕವಿಯುತ್ತಿದೆ."

ಕತ್ತಲೆಯ ವರ್ಣನೆಯನ್ನು ನೋಡಿ:—

"ಕತ್ತಲು ಕಾಡಿಗೆಯಂತೆ ಕಪ್ಪಾಗಿ ನನ್ನನ್ನು ಒಂಟಿಯಾಗಿ ಮಾಡಿ ಕವಿಯುತ್ತಿದೆ.
ಈ ನಿಶಿಯು ನಿನ್ನ ಕೇಶರಾಜಿಯಂತೆ ಕೃಷ್ಣವೂ ದೀರ್ಘವೂ ಆಗಿದೆ."

ಹಾಗೆ ಪ್ರಿಯೆಯನ್ನು ಹೆದರಿಸುತ್ತಾ ಕೊನೆಗೆ ಕವಿಯು ಹೀಗೆಂದು ಹೇಳುವನು:—

"ಪ್ರಿಯೆ, ಈ ರಾತ್ರಿ ಮಾತ್ರ ಈ ಒಂದೇ ಒಂದು ರಾತ್ರಿ ನಕ್ಷತ್ರಗಳಿಂದ ಕೂಡಿರುವ ಆ ಕೇಶರಾಜಿಯ ಮರೆಯಲ್ಲಿ ಈ ಬಡಪಾಪಿಗೆ ಸ್ವಲ್ಪ ಸ್ಥಳವನ್ನು ಕೊಡು."

ಬೆದರಿಸುವುದಕ್ಕೆ ಆರಂಭಿಸಿದ ಅಭ್ಯರ್ಥಿಯು ಭಿಕ್ಷೆಯನ್ನು ಬೇಡಿ ಮುಗಿಯುತ್ತಾನೆ. ಇದು ನ್ಯಾಯ. ಇವನು ಅಪೇಕ್ಷಿಸುವುದು

ಪ್ರಿಯೆಯ ಸಹವಾಸ. ಅವಳು ದಯೆತೋರದಿದ್ದರೆ ಇವನು ಕೆಟ್ಟನು. ಅವಳಿಗೆ ಶಿಕ್ಷೆ ಆಗಿ ಇವನಿಗೆ ಬಂದ ಫಲವೇನು? ಜೆದರಿಸಿ ಯಾವ ಲಾಭವನ್ನೂ ಪಡೆಯುವಂತಿಲ್ಲ; ಜೋಡಿ ಪಡೆದರೂ ಪಡೆಯಬಹುದು. ಹಾಫೀಸ್ ಕವಿಯು ಪ್ರೇಮದ ಸ್ವಭಾವವನ್ನು ಬಲ್ಲವನಾದ್ದರಿಂದ ಭಯಪಡಿಸುವುದರಲ್ಲಿ ಆರಂಭಮಾಡಿದ ಮಾತನ್ನು ಪ್ರಾರ್ಥನೆಯಿಂದ ಮುಗಿಸುತ್ತಾನೆ. ಇಷ್ಟು ತಿಳಿವಿಲ್ಲದ ಕವಿಯು ಅದನ್ನು ಭಯಪಡಿಸುವ ಮಾತಿನಲ್ಲಿಯೇ ಮುಗಿಸುತಿದ್ದನು.

ಇನ್ನೊಂದು ಪದ್ಯದಲ್ಲಿ ತಾನು ನೋಡಿದ ಒಬ್ಬ ಸುಂದರಿಯ ವಿಷಯವಾಗಿ ಹೀಗೆಂದು ಹೇಳುತ್ತಾನೆ:—

"ಈ ಸೌಂದರ್ಯಜ್ಯೋತಿಯು ಯಾರಿಗೆ ಸೇರಿದ್ದು?
ಇದು ಯಾರ ಮನೆಯನ್ನು ಬೆಳಗುತ್ತದೆ?
ಈ ಇಂದ್ರಜಾಲದ ವಾತಾಯನವು ಯಾರದು?
ಇದು ಯಾರಿಗೆ ಸೇರಿದ ಮಾಯಾಪ್ರದೀಪ?"

ಹೀಗೆಂದು ಸುಂದರಿಯ ಸೌಂದರ್ಯವನ್ನೂ ಅವಳ ನೆಂಟರು, ಇಷ್ಟರು, ಮನೆ, ಮಠ ಇವುಗಳನ್ನೂ ಕುರಿತು ಹತ್ತಾರು ಪ್ರಶ್ನೆಗಳನ್ನು ಕೇಳುತ್ತಾನೆ. ಸುಂದರವಾದ ರೂಪವನ್ನು ನೋಡಿದಾಗ ಎಲ್ಲರ ಮನಸ್ಸೂ ಸ್ವಲ್ಪಮಟ್ಟಿಗೆ ಹೀಗೆ ಪ್ರವರ್ತಿಸುವುದು. ಆದರೆ ಸಾಮಾನ್ಯರು ಈ ಪ್ರವೃತ್ತಿಯು ತಪ್ಪೆಂದು ಅದನ್ನು ಮೊದಲಲ್ಲೇ ನಿರೋಧಿಸುವರು. ಈ ಕವಿಯಾದರೋ ದೋಷವನ್ನರಿಯದ ಎಳೆಯ ಮಗುವಿನಂತೆ ತೋರುವ ಪ್ರಶ್ನೆಯನ್ನೆಲ್ಲಾ ಬರೆದಿಟ್ಟಿದ್ದಾನೆ. ಮನಸ್ಸಿನ ಪ್ರವೃತ್ತಿಯ ಸಾಧುತೆಯ ವಿಷಯದಲ್ಲಿ ಇವನಿಗೆ ಸಂದೇಹವಿಲ್ಲ. ಇವನ ಹೃದಯವು ಅಷ್ಟು ಸರಳವಾದುದು; ಅಷ್ಟು ಕಲ್ಮಷ ರಹಿತವಾದುದು.

ಕವಿಯು ಇನ್ನೊಂದು ಪದ್ಯದಲ್ಲಿ ಪ್ರೇಯಸಿಯ ಸೌಂದರ್ಯವನ್ನು ಕುರಿತು ಹೀಗೆಂದು ಚರ್ಚೆ ಮಾಡಿದ್ದಾನೆ:—

"ರೂಪು ಎಂದರೆ ಅಷ್ಟರಲ್ಲಿ ಏನೂ ಆಗುವುದಿಲ್ಲ.

ಯಾವ ಒಂದು ಮಾತಿನಿಂದಲೂ ಇವಳ ಸೊಗಸು ಇದೇ ಎಂದು ಹೇಳುವುದಕ್ಕಾಗುವುದಿಲ್ಲ.

Not all the manifestations are got themselves



ಯಾವ ಒಂದನ್ನು ಹೇಳಿದರೂ ಇವಳು ತದತೀತಳಾಗಿ ಇದ್ದಾಳೆ.
ವಿಲಕ್ಷಣವಾಗಿ ಬೇರೆಯಾಗಿ ಒಂದು ಇಂದ್ರಜಾಲದ ಸೊಗಸಿನಿಂದ ಕಾಣುತ್ತಾಳೆ.
ಅವಳ ಕಿವಿ, ಅವಳ ಕೆನ್ನೆ, ಕಣ್ಣು, ಮೂಗು ಯಾವುದೂ ಅವಳಲ್ಲ.
ಅವಳ ಕೇಶರಾಶಿಯು ಅದ್ಭುತವಾದುದು—ಅದೂ ಅವಳಲ್ಲ.
ಅವಳ ನಡು ರೇಷ್ಮೆಯ ದಾರದಂತೆ ಸಣ್ಣ.
ಅವಳ ಬಾಯಿ ಒಂದು ರತ್ನ—ಆದರೆ ಇವು ಅವಳಲ್ಲ.
ಏನು ಹೇಳಿದರೂ ಅವಳ ಸೊಗಸನ್ನು ಹೇಳಿದ ಹಾಗಲ್ಲ.
ಅಪ್ಸರಸ್ತ್ರೀಯರ ಸೊಗಸು ಏನೋ ಒಂದು ಮಾದರಿಯ ಸೊಗಸೇ ನಿಜ.
ಆದರೆ ಇವಳ ಸೊಗಸೇ ನಿಜವಾದ ಸೊಗಸು.''

ಕವಿಯು ಹೀಗೆ ಸೌಂದರ್ಯವು ಬರಿಯ ಸಂಕಲನದ ಫಲವಲ್ಲವೆಂದೂ ಅದರ ತತ್ತ್ವವು ಕೇವಲ ಆಕಾರವನ್ನು ಮೀರಿದ ಸೂಕ್ಷ್ಮ ತತ್ತ್ವವೆಂದೂ ತಿಳಿಸಿದ್ದಾನೆ.

ಇನ್ನೊಂದು ಪದ್ಯದಲ್ಲಿ ತನ್ನ ಪ್ರಿಯೆಯು ಎಲ್ಲಿಗೋ ಪ್ರಯಾಣ ಹೊರಟಿರುವುದಾಗಿ ವರ್ಣಿಸುತ್ತಾ ಕೊನೆಗೆ ಪ್ರಣಯಿಗೆ ಸಹಜವಾದ ಸ್ವಾರ್ಥತೆಯಿಂದ ಹೀಗೆನ್ನುತ್ತಾನೆ:—

''ಇವಳು ಈಗ ಹೊರಟುಹೋಗುತ್ತಾಳೆ. ಇವಳ ವಿರಹವನ್ನು ನಾನು ಹೇಗೆ ತಡೆಯಲಿ.
ಆದರೆ ಹೋಗುವೆನಲ್ಲಾ ಎಂದು ಇವಳು ಸ್ವಲ್ಪ ಖಿನ್ನಳಾದರೆ ಇದ್ದೀತು!''

ಎಂದರೆ ಪ್ರಿಯೆಗೆ ತನ್ನಲ್ಲಿ ಅನುರಾಗವಿರುವುದು ವ್ಯಕ್ತವಾದರೆ ಅವಳ ವಿರಹವನ್ನು ಸ್ವಲ್ಪಮಟ್ಟಿಗೆ ತಡೆಯಬಹುದು. ಪ್ರೇಯಸಿಯು ಹೊರಟು ಹೋದಮೇಲೆ ಪ್ರಣಯಿಗಳು ಹೀಗೆ ಕಾಲವನ್ನು ಕಳೆದರಂತೆ:

''ದೀರ್ಘವಾದ ರಾತ್ರಿಯೆಲ್ಲಾ ನಿನ್ನ ದೀರ್ಘಕೇಶರಾಶಿಯನ್ನು ಕುರಿತು ಮಾತನಾಡುತಿದ್ದೆವು. ಈ ದೀರ್ಘಯಾಮಗಳು ಈ ಮಾತುಗಳನ್ನು ಕೇಳುತ್ತಾ ಅಂಧಕಾರದಲ್ಲಿ ಉರುಳಿಹೋದವು. ಪ್ರಪಂಚವು ಧೀರವಾಗಿ ನಕ್ಷತ್ರಗಳ ಅಡಿಯಲ್ಲಿ ನಿದ್ರೆಯಲ್ಲಿ ನಡೆದು ಉದಯವನ್ನು ಸೇರಿತು.''

ಅನೇಕ ವೇಳೆ ಕವಿಯು ಮುದುಕನಾದ ತಾನು ಹುಡುಗಿ ಒಬ್ಬ ಳಲ್ಲಿ ಪ್ರೇಮವನ್ನು ಇಟ್ಟಿರುವುದಾಗಿ ಹೇಳುವನು.

> "ನನಗೆ ನನ್ನ ಅರುವತ್ತನೆಯ ವರುಷಕ್ಕೆ ಒಂದು ಅವಿವೇಕ ಕನಿದಿದೆ. ನನ್ನ ನರೆತ ತಲೆಯು ಒಬ್ಬ ಹುಡುಗಿಯ ಪ್ರೀತಿಯಿಂದ ತುಂಬಿಹೋಗಿದೆ. ಒಂದು ಎಳೆಯ ಮಗುವಿನ ಹಾಗೆ ಈ ಬಲೆಗೆ ನಾನು ಸಿಕ್ಕಿದೆನಲ್ಲಾ—ಹುಡುಗನಾಗಿದ್ದಾಗ ನಾನು ಎಷ್ಟು ಬುದ್ಧಿವಂತ ನಾಗಿದ್ದೆ!"

ಒಂದು ಸಲ ಬಹಳ ಕೋಪದಿಂದ ಹೀಗೆನ್ನುತ್ತಾನೆ:—

> "ನೀವು ಹಾಫೀಸನ ಮಾತು ಕೇಳಿರಬಹುದು. ಅವನು ಪಂಡಿತ ಮಾನ್ಯನೆಂದು ತಿಳಿದಿರಬಹುದು. ಬುದ್ಧಿವಂತನೆಂದೂ ವಿವೇಕಿಯೆಂದೂ ಕೇಳಿರಬಹುದು. ಆ ಮಾತನ್ನು ನಂಬಬೇಡಿ. ಅವನು ದಡ್ಡರ ದೊರೆ."

ಇದರ ಅನ್ಯಾಯವೇನೆಂದರೆ ಮುದುಕನ ಮನಸ್ಸಿನಲ್ಲಿ ಇಷ್ಟು ಪ್ರೇಮವನ್ನುಂಟುಮಾಡಬಲ್ಲ ಸುಂದರಿಯು ಅವನ ಬತ್ತಿದ ಕೆನ್ನೆಯನ್ನು ತುಂಬಿಸಲಾರಳು. ಆದರೆ ಕವಿಯು ಹೀಗೆಂದು ಸಮಾಧಾನ ತಂದು ಕೊಳ್ಳುತ್ತಾನೆ:—

> "ಹಾಡುವ ನಮ್ಮವರ ಪಾಡೆಲ್ಲಾ ಇಷ್ಟೇ—
>
> ನಾವು ಊಹೆಯ ಪುತ್ರರು; ಆದುದರಿಂದ ಯಾವ ಕನಸಿಗೂ ಅಧೀನರು. ಬರಿಯ ಒಂದು ಹೂವಿಗೆ ನಾವು ಆಜ್ಞಾಧಾರಕರು."

ಇನ್ನೊಂದು ಕಡೆ ತನ್ನ ಸ್ತೋತ್ರವನ್ನೆಲ್ಲಾ ಲಕ್ಷ್ಯಮಾಡದೆ ಇರುವ ಪ್ರೇಯಸಿಯನ್ನು ನೆನೆದು ಕವಿಯು ಹೀಗೆನ್ನುತ್ತಾನೆ:—

> "ಪ್ರೇಯಸಿಗೆ ಪ್ರಣಯಿಯ ಸ್ತೋತ್ರವು ಅವಶ್ಯಕವಲ್ಲ.
> ಇದನ್ನು ಪ್ರಣಯಿಯು ಬಲ್ಲನು.
> ಗುಲಾಬಿಗೆ ಬೇರೆ ಸುಗಂಧವೇಕೆ."

ಕವಿಯು ಮತ್ತೊಂದು ಕಡೆ ತನ್ನ ಪ್ರಿಯೆಯು ಹೊರಟು ಹೋಗಿರುವದಾಗಿಯೂ ಅವಳು ಇಂಥ ಅಂಥ ದುಷ್ಟಳೆಂದೂ ಹೇಳಿ, ಕೊನೆಗೆ "ಆದರೂ ಅವಳು ಹಾಫೀಸನಿಗೆ ಬಹಳ ಬೇಕಾದವಳು, ಅವಳು ಸಿಕ್ಕಿದರೆ ಅವಳನ್ನು ಒಡನೆಯೇ ಅವನ ಬಳಿಗೆ ಕರೆದುಕೊಂಡು ಬನ್ನಿ" ಎನ್ನುವನು.

ಪ್ರೇಮವೆಲ್ಲ ಹೀಗೆಯೆ; ಪ್ರೀತ ವಸ್ತುವಿನಲ್ಲಿ ಅದು ಗುಣವನ್ನು ಗಣಿಸುವುದಿಲ್ಲ.

ಮೇಲೆ ಹೇಳಿದ ಹುಡುಗಿಯನ್ನು ಕುರಿತೋ ಏನೋ ಕವಿಯು ಒಂದು ಪದ್ಯದಲ್ಲಿ ಹೀಗೆಂದು ಹೇಳುತ್ತಾನೆ:—

"ನೀನು ಶುಕ್ಲಪಕ್ಷದ ನೂತನ ಚಂದ್ರಕಲೆಯಂತೆ ಇದ್ದಾಗಲೇ
ನಾನು ನಿನ್ನಲ್ಲಿ ಪ್ರೀತಿಯನ್ನಿಟ್ಟೆನು.

ಬೆಳ್ಳಿಯ ಪಾದುಕೆಗಳನ್ನಿಟ್ಟ ಸಣ್ಣ ಹುಡುಗಿ ಆಗ ನೀನು; ಈಗಿ
ನಂತೆ ಪೀನಪಯೋಧರೆಯಾದ ಸುಂದರಿಯಾಗಿರಲಿಲ್ಲ.

ಈಗ ನೀನು ಸುಂದರಿಯಾಗಿದ್ದೀಯೆ.
ನನ್ನನ್ನು ಜೊತೆಗೆ ಕರೆದುಕೋ."

ಕವಿಯ ಮಾತು ಯಾವಾಗಲೂ ಹೀಗೆ ನಿಜವಾದ ಆಶಯವನ್ನೇ ಸೂಚಿಸುತ್ತಿರಲಿಲ್ಲ. ಒಂದೊಂದು ಸಲ ಹಾಸ್ಯವಾಗಿ ಮಾತನಾಡುತ್ತಾನೆ:

"ನನ್ನ ಪ್ರಿಯೆಯು ಬಹಳ ವಯಸ್ಸಾದವಳಂತೆ ಆಡುವಳಾದರೂ
ಅವಳು ನಿಜವಾಗಿಯೂ ಇನ್ನೂ ಹುಡುಗಿ.

ಪ್ರಸಿದ್ಧನಾದ ನನ್ನ ಹೃದಯವನ್ನು ಕದ್ದುಕೊಂಡಿರುವ ಇವಳಿಗೆ
ಈಗ ಇನ್ನೂ ಹದಿನಾಲ್ಕು ವರುಷ.

ಇದು ಸರಿ, ಇದು ತಪ್ಪು ಎನ್ನುವುದು ಇವಳಿಗೆ ತಿಳಿಯುವುದಿಲ್ಲ;
ಇವಳು ಚಂದ್ರನಿಂದ ಇಳಿದುಬಂದ ಹಸುಗೂಸು.

ಇವಳಿಗೆ ದಯೆ ತಿಳಿಯದು; ಪ್ರೀತಿ ತಿಳಿಯದು. ಜಾಗ್ರತೆ
ತಿಳಿಯುವಂತೆ ದೇವರು ಅನುಗ್ರಹಿಸಲಿ.

ನಿಜವಾಗಿಯೂ ನನ್ನ ಪ್ರೇಯಸಿಯು ಎಷ್ಟು ಚಿಕ್ಕವಳೆಂದರೆ
ಇವಳು ಇಷ್ಟು ಹಾವ ಇಷ್ಟು ಭಾವವುಳ್ಳವಳಾದರೂ

ಇವಳು ಕುಡಿದ ತಾಯ ಹಾಲಿನ ರುಚಿಯು ಇವಳ ತುಟಿಯಲ್ಲಿ
ಇನ್ನೂ ಇದೆ."

ಇಷ್ಟು ಸಣ್ಣ ಹುಡುಗಿಯಾದರೂ ಇವಳು ತನ್ನ ಮನಸ್ಸನ್ನು ಭೇದಿಸಿರುವುದನ್ನು ನೋಡಿ, ಕವಿಯು ಇವಳ ಈ ಅಪ್ರತಿಹತವಾದ ಶಕ್ತಿಗೆ ಅವಕಾಶವುಳ್ಳ ಕಸಬು ಒಂದನ್ನು ಊಹಿಸುತ್ತಾನೆ:—

"ನನ್ನ ಪ್ರೇಯಸಿಯು ಹೀಗೆ ಹೃದಯಗಳನ್ನು ಭೇದಿಸಿ ಧೀರರನ್ನೂ ಶಕ್ತರನ್ನೂ ಹೀಗೆ ಜಯಿಸುವುದಾದರೆ,

ಸುಲ್ತಾನನು ಇವಳನ್ನು ಕರೆಸಿ, ತನ್ನ ರಕ್ಷಕ ಸೇನೆಗೆ ದಳಪತಿಯನ್ನಾಗಿ ಮಾಡಬಹುದು. ಏಕೆಂದರೆ ಶಕ್ತರನ್ನು ಮುರಿಯುವುದಕ್ಕೂ ದುಷ್ಟರನ್ನು ನಿಗ್ರಹಿಸುವುದಕ್ಕೂ ಇವಳ ನೋಟದಲ್ಲಿ ಒಂದು ವಿಲಕ್ಷಣವಾದ ಪ್ರಭಾವವಿದೆ.

ಒಂದು ಸಲ ನೋಡಿದಳೆಂದರೆ ನೀನು ಪ್ರಾಣವನ್ನು ಬಿಡುವೆ.

ಇಷ್ಟಕ್ಕೆ ಇವಳು ಇನ್ನೂ ಮಗು. ಈಗಾಗಲೇ ಇವಳಲ್ಲಿ ಇಷ್ಟು ಶಕ್ತಿ!"

ಈ ಮಾತುಗಳ ಊಹೆಯಾಗಲಿ ಹಾಸ್ಯವಾಗಲಿ ಎಷ್ಟು ಸಯವಾದುವು. ಹುಡುಗಿಯ ಚಿಕ್ಕ ವಯಸ್ಸಿಗೂ ಅವಳ ನಡತೆಯ ದೊಡ್ಡಸ್ತಿಕೆಗೂ ಇರುವ ವೈಷಮ್ಯವನ್ನು ಕವಿಯು ಎಷ್ಟು ಸರಸವಾಗಿ ಒತ್ತಿ ಹೇಳಿದ್ದಾನೆ. ಇದಲ್ಲದೆ ಸುಲ್ತಾನರು ಕರೆಸುವುದು ಬೇರೆ!

ಪ್ರೇಯಸಿಯ ಲಾಭದಿಂದ ಬರುವ ಆನಂದವನ್ನು ಕವಿಯು ಒಂದು ಕಡೆ ಹೀಗೆ ವರ್ಣಿಸಿದ್ದಾನೆ:—

"ಈ ಬೆಳದಿಂಗಳ ಮಧ್ಯೆ ನೆರಳಲ್ಲಿ ನಿನ್ನ ಪಕ್ಕದಲ್ಲಿರುತ್ತಾ ನನ್ನ ಹೃದಯವು ಆನಂದದಿಂದ ಎಷ್ಟು ಉತ್ಕಂಠಿತವಾಗಿದೆ.

ಈ ಚಂದ್ರಿಕೆಯಲ್ಲಿ ಈ ಮರೀಚಿವೃಕ್ಷಗಳ ಕೆಳಗೆ ಈ ವಿಲಕ್ಷಣ ಪ್ರಭೆಯಲ್ಲಿ ನಿನ್ನ ಮುಖವು ಎಷ್ಟು ವಿಚಿತ್ರವಾಗಿ ಕಾಣುತ್ತಿದೆ.

ಓ ಮಾಯೆಯೇ ಓ ಕನಸೇ ಓ ಊಹಿಸಲಾಗದ ಆನಂದವೇ

ನದೀತೀರದ ಮರೀಚಿವೃಕ್ಷಗಳ ಕೆಳಗೆ ನಾವು ಇಂಥ ಇನ್ನೊಂದು ರಾತ್ರಿಯನ್ನು ನೋಡುವುದಿಲ್ಲ."

ಈ ಕೊನೆಯ ಮಾತಿನ ಖೇದವು ಎಲ್ಲಾ ಆನಂದದ ಉತ್ಕಂಠತೆಯಲ್ಲಿಯೂ ಸೇರಿದ್ದು. "We look before and after and pine for what is not." ನಾವು ನಮ್ಮ ಸುಖಗಳಲ್ಲಿ ಹಿಂದು ಮುಂದು ನೋಡಿ ಸುಖದ ಶುದ್ಧ ರಸದೊಂದಿಗೆ ಸ್ವಲ್ಪ ವ್ಯಸನವನ್ನು ಬೆರಸಿಕೊಳ್ಳುತ್ತೇವೆ. ಅಂತ್ಯರಹಿತವಲ್ಲದ ಆನಂದವು ಆನಂದವಲ್ಲ. ಇದು ಮುಂದಣ ಪದ್ಯದಲ್ಲಿ ಇನ್ನೂ ವ್ಯಕ್ತವಾಗುತ್ತದೆ.

"ನದಿಯು ಮುಂದೆ ಎಷ್ಟು ಚೆನ್ನಾಗಿ ಹರಿಯುತ್ತದೆ.
ರುಕ್ನಾಬಾದು ಬೆಳದಿಂಗಳಲ್ಲಿ ಸುಂದರವಾಗಿ ತೋರುತ್ತಲಿದೆ.
ರಾತ್ರಿಗಳಲ್ಲೆಲ್ಲಾ ಉತ್ತಮವಾದ ಈ ರಾತ್ರೆಯು ಕಳೆಯದೇ ಇದ್ದರೆ
ಅಥವಾ ನಾವು ಈಗ ಇರುವ ಹಾಗೆ ಈ ಬೆಳದಿಂಗಳಲ್ಲೇ ತೀರಿ ಹೋದರೆ ಇದ್ದೀತು.
ಇನ್ನೇನು, ಉದಯವು ಬರುವುದು ; ಈ ನಕ್ಷತ್ರಗಳನ್ನು ಮರೆಯಿಸುವುದು ;
ಈ ಮಹೇಂದ್ರಜಾಲದ ಯಾಮಿನಿಯು ಸಾಮಾನ್ಯ ದಿನವಾಗುವುದು."

ಕವಿಯು ಗೀತೆಗಳಲ್ಲಿ ಅನೇಕ ಕಡೆ ಅವನು ಮದ್ಯವನ್ನು ಸ್ತೋತ್ರ ಮಾಡಿರುವನು. ಅದರಿಂದ ಇಲ್ಲಿ ಯಾವ ಭಾಗವನ್ನೂ ಉದ್ಧರಿಸಿಲ್ಲ.

ಈ ರೀತಿಯ ಪ್ರಣಯ ವರ್ಣನೆಯೂ ಸುರಾಸ್ತವವೂ ಯಾರಿಗಾದರೂ ಸ್ವಲ್ಪ ಆಶಂಕೆಯನ್ನು ಹುಟ್ಟಿಸುವುವು. ಹಾಫೀಸ್ ಕವಿಯಲ್ಲಿ ಆಶಂಕೆಯನ್ನು ಹುಟ್ಟಿಸುವುದಕ್ಕೆ ಇದು ಇಷ್ಟೇ ಅಲ್ಲದೆ ಬೇರೊಂದು ವಿಷಯವಿತ್ತು. ಇದನ್ನು ಮೊದಲೇ ಸೂಚಿಸಿದೆ. ನಮ್ಮಲ್ಲಿ ಚಾರ್ವಾಕರು

ಭಸ್ಮೀ ಭೂತಸ್ಯ ದೇಹಸ್ಯ ಪುನರಾಗಮನಃ ಕುತಃ
ತಸ್ಮಾತ್ ಸರ್ವ ಪ್ರಕಾರೇಣ ಋಣಂ ಕೃತ್ವಾ ಘೃತಂ ಪಿಬ

ಎಂದು ಹೇಳಿದ ಹಾಗೆ ಎಲ್ಲಾ ಜನಾಂಗಗಳಲ್ಲಿಯೂ ಕೆಲವು ಜನರು "ಮನುಷ್ಯನಿಗೆ ಇರುವುದು ಕೊಂಚ ದಿವಸ, ಅದರಲ್ಲಿ ಆದಷ್ಟು ಸುಖವನ್ನು ಪಡೆ" ಎಂದು ಹೇಳುವವರು ಇರುವರು. ಹಾಫೀಸ್ ಕವಿಯು ಈ ರೀತಿಯ ಮಾತನ್ನು ಬಹಳ ಕಡೆ ಹೇಳಿರುವನು. ಒಂದು ಕಡೆ:—

"ರುಕ್ನಾ ನದಿಯು ಹರಿಯುತ್ತಲೇ ಇರುವುದು.
ವರುಷ ವರುಷವೂ ಕೋಗಿಲೆಯು ವಸಂತದೊಂದಿಗೆ ಬಂದು ಬಂದು ಮ್ಯಾಸಲದ ಗುಲಾಬಿಯನ್ನು ಕರೆದು ಮತ್ತೆ ಗಾನಮಾಡುವುದು.
ನಮಗೆ ಇದು ಒಂದೂ ತಿಳಿಯುವುದಿಲ್ಲ.
ನಮಗೆ ಆಗ ನಗು ಅಳು ಒಂದೂ ಇಲ್ಲ.
ಮಾತು ಕತೆ ಇಲ್ಲ.

ಸ್ವರ್ಗಲೋಕದಲ್ಲಿ ಕಣ್ಣು ಕಿವಿ ಮುಚ್ಚಿಕೊಂಡು ಸುಮ್ಮನಿರುತ್ತೇವೆ.''

ಇನ್ನೊಂದು ಕಡೆ:—

''ಮದ್ಯವು ಸ್ವಚ್ಛವಾಗಿವೆ; ವಿಹಾರದ ದಿನಗಳು ಗಾಳಿಯಲ್ಲಿ ಗಾನವನ್ನು ತುಂಬುತ್ತಿವೆ.

ಮುಂದಣ ವಸಂತವು ಯಾರಿಗೂ ಭದ್ರವಲ್ಲ.
ಸಣ್ಣವರಿಗೆ ಕೂಡ ಭದ್ರವಲ್ಲ.''

ಇನ್ನೊಂದು ಕಡೆ:—

''ಒಂದು ದಿನವೊ ಎರಡು ದಿನವೊ ಈ ಹೂವು ನಮ್ಮದು.
ಒಂದು ದಿನವೋ ಎರಡು ದಿನವೋ ಈ ನಿಕುಂಜವು ನಮ್ಮದು.''

ಮತ್ತೊಂದು ಕಡೆ:—

''ಹೂವಿನಷ್ಟು ಜಾಗ್ರತೆ ಬಾಡಬೇಕಾದರೆ
ಮುಖ ಹೊರತು ಇನ್ನು ಯಾವುದೂ ಇಲ್ಲ.''

ಇನ್ನೊಂದು ಕಡೆ:—

''ಗಾಳಿಗೆ ಇಟ್ಟ ದೀಪವನ್ನು ನೋಡಿದ್ದೀಯಾ?
ಕಾಲದ ಮುಂದೆ ಸೌಂದರ್ಯವು ಹಾಗೆ.''

ಮತ್ತೊಂದು ಕಡೆ ಪ್ರೇಯಸಿಯನ್ನು ಕುರಿತು ಪರಿಹಾಸ್ಯದಲ್ಲಿ:—

''ನಿನ್ನ ಕಿವಿಗೆ ಬುದ್ಧಿಯ ಮಾತಿಗಿಂತಲೂ ಓಲೆಗಳು ಚೆನ್ನಾಗಿ ಒಪ್ಪವುವು.

ಆದರೂ ಒಂದು ಮಾತನ್ನು ಈ ಪುಟ್ಟ ಕಿವಿಗಳಲ್ಲಿ ಈ ದಿನ ಧರಿಸು.
'ಎಲ್ಲವೂ ಗತಿಸುವುದೆಂದು ಹಾಫೀಜನು ಹೇಳಿದ್ದಾನೆ.
ನನ್ನ ಸೌಂದರ್ಯವೂ ಸ್ವಲ್ಪಕಾಲ ಮಾತ್ರ ಇರುವುದು.'

ಹೀಗೆ ಕವಿಯು ಮತ್ತೆ ಮತ್ತೆ ''ಕಾಲ ಇರುವುದು ಕಡಿಮೆ— ಅದರಲ್ಲಿ ಜೀವನದ ಸುಖವನ್ನು ತಿಳಿ'' ಎಂದು ಹೇಳುತ್ತಾನೆ. ಬರಿಯ ಇಷ್ಟೇ ಮಾತಾಗಿದ್ದರೆ ಸರಿಯಾಗಿಯೋ ತಪ್ಪಾಗಿಯೋ ಸುಖ ಹೇಗೆ ಬಂದರೆ ಹಾಗೆ ಅನುಭವಿಸುವುದೆಂದು ಕವಿಯು ಹೇಳುವುದಾಗಿ ಊಹಿಸ ಬಹುದಾಗಿತ್ತು. ಆದರೆ ಕವಿಯ ಅಭಿಪ್ರಾಯವು ಇದಲ್ಲ. ಒಂದು ಕಡೆ

"ನಮ್ಮ ಪಥವು ವಿಚಿತ್ರವಾದುದು ಭೀಕರವಾದುದು.
ಅದು ಎಲ್ಲಿಗೆ ಒಯ್ಯುವುದೆಂದು ಹೇಳುವುದಕ್ಕಾಗುವುದಿಲ್ಲ.
ನಮ್ಮ ಪ್ರಿಯನು ಅದನ್ನು ಬಲ್ಲನೆಂದು ನನಗೆ ಒಮ್ಮೊಮ್ಮೆ ತೋರುತ್ತದೆ."

ಎಂದು ಹೇಳಿದಾನೆ. ಎಂದರೆ ನಮ್ಮ ಮನಸ್ಸಿನ ಪ್ರವೃತ್ತಿಗಳೆಲ್ಲವೂ ಕೆಟ್ಟುವೆಂದು ಎಲ್ಲವನ್ನೂ ನಿಗ್ರಹಿಸಬಾರದು. ಜೀವನವು ಹೀಗೆಯೆ ಎಂದು ನಿಷ್ಕರ್ಷೆಯಿಂದ ಹೇಳಲು ಸಾಧ್ಯವಲ್ಲ. ಪರಮಾತ್ಮನಲ್ಲಿ ಭಾರ ಹಾಕಿ, ಅವನು ತೋರಿಸಿದ ಕಡೆಗೆ ಹೋಗುವುದು ಸರಿಯೆಂದು ಕವಿಯ ಅಭಿಪ್ರಾಯ. ಕವಿಯ ಅಭಿಪ್ರಾಯ ಹೀಗಾದರೂ ಎಲ್ಲರೂ ಅವನ ಮಾತಿನ ಒಂದು ಭಾಗದ ಅರ್ಥವನ್ನು ಮಾತ್ರ ಗ್ರಹಿಸಿ, ಅವನ ಕಾಲದ ನೀತಿ ಪಕ್ಷಪಾತಿಗಳು ಅವನ ಮೇಲೆ ಕತ್ತಿಯನ್ನು ಕಟ್ಟಿದರು. ಹಾಫೀಸನ ಗೀತೆಗಳಲ್ಲಿ ಬಹಳಕಡೆ ನೀತಿ ಪಕ್ಷಪಾತಿಗಳನ್ನು ಕುರಿತ ಮಾತುಗಳು ಇವೆ. ಅವನು ಒಂದು ಕಡೆ "ಜಾಹೀದ್" ಎಂದು ನೀತಿಜ್ಞನನ್ನು ಕುರಿತು ಹೀಗೆಂದು ಹೇಳಿದ್ದಾನೆ:—

"ಜಾಹೀದ್, ನೀನು ನನ್ನ ಪಾಪಗಳ ಗೋಜಿಗೆ ಬರಬೇಡ.
ಅವು ನಿನಗೆ ಸೇರಿದುವಲ್ಲ ನನ್ನವು; ನನ್ನವನ್ನು ನಾನು ನೋಡಿ ಕೊಳ್ಳುತ್ತೇನೆ.

ನಾನು ಒಳ್ಳೆಯವನಾದರೆ ನನಗೇ ಒಳ್ಳೆಯದು.
ನಾನು ಕೆಟ್ಟವನಾದರೆ ನನಗೇ ಕೆಟ್ಟದ್ದು.
ಅಯ್ಯಾ, ಈ ಸೃಷ್ಟಿಯಲ್ಲಿ—ಇದು ನಿನಗೆ ತಿಳಿಯದೆ ಇರಬಹುದು—
ಪಾಪಿಗಳಿಗೆ ದಯೆತೋರುವ ತತ್ತ್ವ ಒಂದಿದೆ.
ಮುಂದೆ ಇರುವ ಲೋಕವು ಒಳ್ಳೆಯ ಲೋಕ; ಇದೇನೊ ನಿಜ.
ಆದರೆ, ಮಹನೀಯಾ, ಈ ಲೋಕವೂ ಒಳ್ಳೆಯದೇ."

ದೇವರೆದುರಿಗೆ ನಿಂತಾಗ್ಗೆ ನಿನ್ನ ಗತಿ ಏನು ಎಂದು ಕೇಳುವುದಾದರೆ ಸ್ವರ್ಗದ ಬಾಗಿಲನ್ನು ತೆಗೆಯುವುದಕ್ಕೆ ಈ ಉಪಾಯವನ್ನು ಹೇಳುತ್ತಾನೆ.

"ಮದ್ಯದ ಪಾತ್ರೆಯಿಂದ ಮೆಲ್ಲಗೆ ಬಾಗಿಲನ್ನು ತಟ್ಟು
ನಿಜವಾಗಿಯೂ ನಿನಗೆ ಆ ಬಾಗಿಲು ತೆರೆಯುವುದು.

ಎಂದರೆ ಜೀವನದಲ್ಲಿ ತೋರುವ ಪ್ರವೃತ್ತಿಗಳನ್ನು ಅನುಸರಿಸಿ, ತಿಳಿದ ಮಟ್ಟಿಗೆ ಸರಿಯಾಗಿ ನಡೆದರೆ ಅದೇ ಸ್ವರ್ಗಕ್ಕೆ ಹೋಗಲು ಅಧಿಕಾರವನ್ನು ಕೊಡುವುದು. ಧ್ಯಾನಮಾಡೆಂದು ನೀತಿವಿದರು ಹೇಳುವುದಕ್ಕೆ ಹಾಫೀಸನು ಧ್ಯಾನಮಾಡುತ್ತಲೇ ಇದ್ದೇನೆಂದು ಹೇಳುತ್ತಾನೆ. ಆದರೆ ಧ್ಯಾನದ ವಿಷಯ ಬೇರೆ.

"ನಾನೂ ದೈವಿಕ ವಿಷಯವನ್ನು ಕುರಿತು ಧ್ಯಾನಮಾಡುತ್ತಿದ್ದೇನೆ.
ಎಲ್ಲಿ ನನಗೆ ಇದನ್ನು ಹೇಳು ನೋಡೋಣ;
ನೋಡು; ಸೃಷ್ಟಿಕರ್ತನು ಶೂನ್ಯವನ್ನು ತೆಗೆದುಕೊಂಡು
ಕೇವಲ ಮಾನಸಿಕವಾದ ಭಾವನೆ ಮಾತ್ರವೊ ಎಂಬಂತೆ
ಕಣ್ಣಿಗೆ ಕಾಣದೆಯೇ ಇರುವಂತೆ
ಪ್ರಣಯಿಯ ಹೃದಯದಲ್ಲಿ ಹೊರತು ಬೇರೆ ಇಲ್ಲವೊ ಎಂಬಂತೆ
ನನ್ನ ಪ್ರಿಯೆಯ ನಡುವನ್ನು ಹೇಗೆ ಮಾಡಿದನು.
ಓ ನೀತಿವಿದನೆ, ಈ ಪ್ರಶ್ನೆಯನ್ನು ಹರಿಸು."

ಮದ್ಯಪಾನವು ತಪ್ಪು ಎಂದು ಹೇಳುವವರಿಗೆ ಕವಿಯು ಇದರಂತೆಯೇ ಕೆಲವು ಉತ್ತರಗಳನ್ನು ಹೇಳುತ್ತಾನೆ:—

"ಭಗವಂತನ ನಿಯಮದಿಂದಲೇ ನಾವು ಮದ್ಯಪಾಯಿಗಳು.
ಪಾನಮಾಡುವುದನ್ನೂ ಆ ತಪ್ಪಿಗೆ ಕ್ಷಮೆಯನ್ನು ಪಡೆಯುವುದನ್ನೂ ಮೊದಲೇ ವಿಧಿಯು ನಮ್ಮ ಹಣೆಯಲ್ಲಿ ಬರೆದಿಟ್ಟಿದ್ದಾನೆ."

ಪಾನಮಾಡುವುದಿಲ್ಲವೆಂದು ಜಂಭಕೊಚ್ಚುವ ನೀತಿಪಕ್ಷಪಾತಿಯನ್ನು ಕುರಿತು

"ಜೋಲು ಬಿದ್ದಿರುವ ನಿನ್ನ ಅಳುಮೊಗವನ್ನು ನೋಡಿದರೇನೇ
ಕುಡಿಯದೆ ಇರುವುದರಿಂದ ನೀನು ಎಷ್ಟು ಕಷ್ಟಪಡುತ್ತಿರುವೆ
ಎಂದು ತಿಳಿಯುತ್ತದೆ.
ಕುಡಿಯದೆ ಇದ್ದೀಯೆ ನಿಜ. ಆದರೆ ಅದರಿಂದ ಎಷ್ಟು ಅಸಮಾಧಾನ!"

ಎಂದು ಹೇಳುತ್ತಾನೆ. ಹಾಫೀಸನು ಈ ರೀತಿಯ ಹಾಸ್ಯದಿಂದಲೂ ಎದುರು ಮಾತಿನಿಂದಲೂ ಮೌಲ್ವಿಗಳನ್ನು ತಿರಸ್ಕರಿಸಿದ್ದರಲ್ಲಿ ನೀತಿಯನ್ನು ದೂಷಿಸಿದನೆಂದು ತಿಳಿಯಬಾರದು. ಅವನು ಕುಡಿದಿರಬಹುದು.

ಇನ್ನೊಬ್ಬನು ಕುಡಿಯದೆ ಇದ್ದಿರಬಹುದು. ಆದ ಮಾತ್ರಕ್ಕೆ ಕುಡಿಯುದವನಿಗಿಂತ ಕುಡಿದವನು ಕೆಟ್ಟವನೆಂದೂ ಕುಡಿದವನು ನರಕಕ್ಕೂ ಕುಡಿಯದವನು ಸ್ವರ್ಗಕ್ಕೂ ಹೋಗುವನೆಂದೂ ಹೇಳುವುದು ಸರಿಯಲ್ಲವೆಂಬುದೇ ಅವನ ಅಭಿಪ್ರಾಯ. ಅವನು ಒಂದು ಕಡೆ ಹೀಗೆ ಬರೆದಿದ್ದಾನೆ:—

"ಒಬ್ಬೊಬ್ಬನ ಹಣೆಯಲ್ಲೂ ದೇವರು ತನ್ನ ಲೇಖಣಿಯನ್ನು ಎಳೆದಿದ್ದಾನೆ.

ಎಲ್ಲಾ ಆದಮೇಲೆ ನಮಗೆ ಆ ಬರವಣಿಗೆ ತಿಳಿಯುತ್ತದೆ.
ಗುಪ್ತವಾದ ಧನದೊಂದಿಗೆ ಗುಪ್ತವಾಗಿ ಸರ್ಪವಿದೆ.

ಹುಟ್ಟಿಗಾಗಿ ಯಾರನ್ನೂ ಹೊಗಳಬೇಡ, ಅವನ ನಡತೆಗಾಗಿ ಹೊಗಳು.

ಒಬ್ಬೊಬ್ಬನನ್ನು ಅವನವನ ಕಾರ್ಯದಿಂದ ನೋಡು.
ಯಾರೇ ಆಗಲಿ ನನ್ನ ಮಾತನ್ನು ತಿಳಿದು ನೋಡಿದರೆ
ನಾನು ಉತ್ತಮವಾದ ಕಾರ್ಯ ಉತ್ತಮವಾದ ಮಾರ್ಗದಲ್ಲಿ
ಸರ್ವದಾ ನಡೆಯುತ್ತಿರುವೆನೆಂಬುದು ಅವರಿಗೆ ತಿಳಿದುಬರುವುದು."

ಪ್ರಾಯಶಃ ಹಾಫೀಸನ ಕಾವ್ಯದ ಎಲ್ಲಾ ಭಾಗವನ್ನೂ ನೋಡಿದವರಿಗೆ ಅವನು ಸ್ವಭಾವದಲ್ಲಿ ದುಷ್ಟನಲ್ಲವೆಂದು ವ್ಯಕ್ತವಾಗುವುದು. ಅದನ್ನು ತಿಳಿಯದೆ ಯಾವುದೋ ಒಂದೆರಡು ವಿಷಯಗಳನ್ನು ಹಿಡಿದುಕೊಂಡು ಅವನನ್ನು ದೂಷಿಸಿದ ಮೌಲ್ವಿಗೆ ಕವಿಯು ಹೇಳಿದ ಮಾತು ನ್ಯಾಯವಾದ ಶಿಕ್ಷೆಯೇ ಎಂದು ಹೇಳಬಹುದು. ಕವಿಯ ಜೀವನವನ್ನೆಲ್ಲಾ ನೋಡಿದ್ದರೆ, ಇದು ಮೌಲ್ವಿಗೂ ತಿಳಿಯುತ್ತಿತ್ತು. ಒಂದು ಗೀತೆಯಲ್ಲಿ ಕವಿಯು ಸ್ತ್ರೀಸೌಂದರ್ಯ ಮದ್ಯಪಾನಗಳ ಮಾತೇ ಇಲ್ಲದೆ ಪ್ರಕೃತಿಯ ಸೊಬಗನ್ನು ವರ್ಣಿಸಿದ್ದಾನೆ:—

"ಗುಲಾಬಿಯ ಗಿಡವು ತನ್ನ ಮುದ್ದಾದ ಕೈಯಲ್ಲಿ ಮಕರಂದದಿಂದ ತುಂಬಿದ ತನ್ನ ಬಟ್ಟಲನ್ನು ಎತ್ತಿ ಹಿಡಿದಿದೆ.

ಶೂನ್ಯವಾಗಿದ್ದ ಭೂಮಿಯು ಹಸುರು ಮೊಗ್ಗುಗಳಿಂದ ತುಂಬುತ್ತಾ ಇದೆ.

ಹೃದಯವೇ, ನಿನ್ನ ನಿಗೂಢ ತತ್ತ್ವಾನ್ವೇಷಣದ ಕಾರ್ಯವನ್ನು ಬಿಡು—ನನ್ನೊಂದಿಗೆ ಹಸುರುಗಾವಲಿಗೆ ಹೊರಟು ಬಾ.

ಉದಯದ ಹಿಮಕಣಗಳು ಸಮುದ್ರದಂತೆ ಮಿನುಗುತ್ತಿವೆ.

ಅಲ್ಲಿ ಕೇಳು, ಆ ಬುಲ್‌ಬುಲ್ ಪಕ್ಷಿಯು ಆನಂದದಿಂದ ಹೊಸದಾಗಿ ಬಂದ ನೂರು ಭಾಷೆಗಳಲ್ಲಿ ಮತ್ತೆ ಆ ಹಿಂದಿನ ಮನೋಹರವಾದ ಕಥೆಯನ್ನು ಹೇಳುತ್ತಿದೆ.

ಪುಸ್ತಕಗಳನ್ನು ಮುಚ್ಚು. ತತ್ತ್ವಗಳೂ ತತ್ತ್ವಜ್ಞರೂ ಅತ್ತ ಇರಲಿ. ಗೀತೆಗಳ ಸಣ್ಣ ಪುಸ್ತಕವನ್ನು ತೆಗೆದುಕೊ. ಹಚ್ಚಗಿರುವ ಮಾರ್ಗದಲ್ಲಿ ನನ್ನೊಂದಿಗೆ ನಡೆದು ಬಾ.

ಕೌಕಸಸ್ ಪರ್ವತದಲ್ಲಿ ಒಂಟಿಯಾಗಿ ಜೀವಿಸುವುದೆನ್ನುವ ಅಂಕಾ ಪಕ್ಷಿಯಂತೆ ನಾವು ಮನುಷ್ಯಮಾತ್ರವನ್ನು ಹಿಂದೆಬಿಟ್ಟು ಜನರ ಹೆಜ್ಜೆಯನ್ನು ಕಾಣದೆ, ಜನರ ಮಾತನ್ನು ಕೇಳದೆ ಇರೋಣ. ನಮ್ಮ ಹೊರತು ಮತ್ತೆ ಯಾವ ಜೊತೆಯೂ ನಮಗೆ ಬೇಡ.

ನಾವು ನಿರ್ಜನತಾ ಪ್ರಣಯಿಗಳಾಗಿದ್ದೇವೆ.

ಹಸುರೆಲೆಗಳ ಶಾಂತಿಗೂ ಕಾಂತಾರಮಧ್ಯದ ಧ್ಯಾನಕ್ಕೂ ಮನಸೋತಿದ್ದೇವೆ. ಪ್ರೇಮವೂ ಅಲ್ಲಿ ಅಪ್ರಕೃತವು.

ಹಾಫೀಸನು ಈ ಮಧುರ ಮಧುಮಾಸದೊಂದಿಗೆ ಒಂಟಿಯಾಗಿರಲು ಅಪೇಕ್ಷಿಸುತ್ತಾನೆ. ಹಾಫೀಸನು ತನ್ನ ಮಧುರ ಮಧುಗೀತದೊಂದಿಗೆ ಒಬ್ಬನೇ ಇರಲು ಆಶಿಸುತ್ತಾನೆ.

ನಿರ್ಜನತೆಯಿಂದಲೂ ನಿಶ್ಶಬ್ದದಿಂದಲೂ ತೇಜಸ್ವಿಗಳಾಗುವ ಅಮರರಾದ ಏಕಾಂತವಾಸಿಗಳಲ್ಲಿ ಹಾಫೀಸನು ಒಬ್ಬನು.''

ಜೀವನದ ಸುಖಗಳನ್ನೂ ಸೌಂದರ್ಯಗಳನ್ನೂ ಅನುಭವಿಸಿದಂತೆ ಹಾಫೀಸನು ಅದರ ಬೇನೆಯನ್ನೂ ಭೀಕರ ಪಕ್ಷವನ್ನೂ ಸ್ಪಷ್ಟವಾಗಿ ಅನುಭವಿಸಿದನು. ಸಂವತ್ಸರಗಳು ಕಳೆದು ಅವನಿಗೆ ದುಃಖವೂ ನಷ್ಟವೂ ಉಂಟಾದಾಗ ಅವನು ತನ್ನ ಹೃದಯದ ಖೇದವನ್ನು ಹಿಂದಿನಂತೆಯೇ ಲಲಿತವಾದ ಭಾವಗರ್ಭಿತವಾದ ಸರ್ವಾಂಗ ಸುಂದರವಾದ ಗೀತೆಯಲ್ಲಿ ಮೊದಲಿನಂತೆ ವ್ಯಕ್ತಪಡಿಸಿದನು. ಅವನ ಪತ್ನಿಯು ತೀರಿಹೋದಾಗ ಅವನು ಹೀಗೆಂದು ಬರೆದನು:—

''ಈ ಮನೆಯು ಒಬ್ಬ ಅಪ್ಸರಸ್ತ್ರೀಯ ಆವಾಸವಾಗಿತ್ತು. ನನ್ನ ಜೊತೆಗೆ ಕೆಲವು ಕಾಲ ಇದ್ದ ಅವಳು ದೇವತೆಗಳಂತೆ ತಲೆಯಿಂದ ಕಾಲುವರೆಗೆ ಪಾವನ ಸ್ವರೂಪಳು. ಅವಳು ಈಗ ತನ್ನ ಅಮರ ಪಥದಲ್ಲಿ ಮುಂದೆ ನಡೆದಳು. ಇದು ನ್ಯಾಯವೇ ಸರಿ.

ಅವಳ ಜ್ಞಾನ ಎಷ್ಟು! ಆದರೂ ಅವಳು ಬರಿಯ ಒಂದು ಪುಷ್ಪ. ಇನ್ನೂ ಸಣ್ಣವಳು; ನನಗಾದರೋ ಎಲ್ಲಾ ಪ್ರಪಂಚವೂ ಅವಳೇ. ನಾನು ಅವಳೊಂದಿಗೆ ಷಿರಾಜಿನಲ್ಲಿ ವಾಸಮಾಡುತ್ತ ಅವಳು ಒಂದು ಕೆಲಸಕ್ಕಾಗಿ ಹೊರಟಿದ್ದಾಳೆಂದು ತಿಳಿಯದೇ ಹೋದೆನು. ಅವಳು ಒಂದು ರಾತ್ರೆ ಇದ್ದು, ಮಾರನೇ ದಿನ ಡೇರೇ ಕಿತ್ತು ನಡೆಯುವ ಪ್ರಯಾಣಿಕಳೆಂದು ತೋರಲಿಲ್ಲ.

ಬೇಸಗೆಯ ದಿನಗಳಲ್ಲಿ ನದೀ ತೀರದ ಹಸುರಿನ ಮೇಲೆ ಅವಳ ಜೊತೆಯಲ್ಲಿ ಕುಳಿತು ಒಂದು ಮಾತನ್ನೂ ಆಡದೆ ಜೀವಿಸುವುದು ಎಷ್ಟು ಸುಖವಾಗಿತ್ತು. ಅವಳು ಆ ನದಿಯ ನೀರಿನಂತೆ ಹರಿದುಹೋಗುತ್ತಿದ್ದಾಳೆಂಬುದು ನನಗೆ ತಿಳಿಯಲಿಲ್ಲ. ಆಗ ಇದ್ದದ್ದು ಜೀವನದ ಸಾರ. ಮಿಕ್ಕ ಎಲ್ಲವೂ ಸುಳ್ಳು, ಹುಚ್ಚು.

ಹೃದಯವೇ, ಅವಳು ನಿನ್ನನ್ನು ಬಿಟ್ಟುಹೋದಳೆಂದು ದೂರಬೇಡ. ತೆರೆಯ ಹಿಂದಣ ಅವಳ ಜನದ ಬಳಿಗೆ ಅವಳು ಹೋಗಬೇಕಾಗಿತ್ತು. ಹಿಂದಕ್ಕೆ ಎಂದು ಬರುವಳೆಂಬುದನ್ನು ಹಾಫೀಸನು ಕಾಣನು.''

ಮಳೆಗಾಲದ ಪ್ರವಾಹದ ಹೊಳೆಯಂತೆ ಜೀವನದ ಕಾಲವು ಹರಿದು ಹೋಗುತ್ತಿರುವುದು. ಮೇಲಣ ನೀರು ಮುಗಿದರೆ ಹೊಳೆಯು ಬತ್ತಿ ಹೋಗುವಂತೆ ಸಂಚಿತಕರ್ಮವು ಮುಗಿದರೆ ನಮ್ಮ ಆಯುಸ್ಸು ಹರಿದು ಮುಗಿಯುವುದು. ಕಾಲವನ್ನು ಹೊಳೆಗೆ ಹೋಲಿಸುವುದು ಒಂದು ಸಾಮಾನ್ಯವಾದ ಉಪಮಾನ. ಆಯುಸ್ಸನ್ನು ಹೋಲಿಸುವುದು ಅಪೂರ್ವ. ಹಳೆಯ ಉಪಮಾನವನ್ನೇ ಹೀಗೆ ಮಾರ್ಪಡಿಸಿ ಬರೆದಿರುವುದರಲ್ಲಿ ಹಾಫೀಸನ ಪ್ರತಿಭೆಯು ವ್ಯಕ್ತವಾಗುವುದು. ಇಷ್ಟಲ್ಲದೆ ಈ ಮಾತಿನಲ್ಲಿ ಎಷ್ಟು ಖೇದವು ತೋರುತ್ತಿದೆ. ನಮಗೆ ಪ್ರಿಯವಾದ ಪ್ರಾಣವು ನಮ್ಮೊಂದಿಗೆ ಇರುವ ಪ್ರತಿಯೊಂದು ಕ್ಷಣದಲ್ಲಿಯೂ ಅಷ್ಟಷ್ಟು ಕಡಿಮೆಯಾಗುತ್ತದೆ. ಅದು ಇರುವುದೇ ನಮಗೆ ಸುಖ; ಆ ಇರುವಿಕೆಯಲ್ಲಿಯೇ ಅದು ಕೃಶವಾಗುತ್ತದೆ. ಅದನ್ನು ನಾವು ತಡೆಯುವಹಾಗಿಲ್ಲ. ಜೀವಿತದ ಹೃದಯವೇ ಮೃತ್ಯುವೆಂದು ಇದಕ್ಕಿಂತ ಸಂಪೂರ್ಣವಾದ ಉಪಮಾನದಿಂದ ವರ್ಣಿಸಿರುವುದು ಸಾಹಿತ್ಯದಲ್ಲಿ ಎಲ್ಲಿಯೂ ಇರಲಾರದು.

ತನ್ನ ಪೋಷಕರಲ್ಲಿ ಒಬ್ಬನಾದ ಇಸ್ಮಾಯಿಲ್ ಎಂಬಾತನು ತೀರಿ ಹೋದಾಗ ಅವನು ಹೀಗೆಂದು ಬರೆದನು:—

"ಈ ಅಸ್ಥಿರವಾದ ಆವಾಸದಲ್ಲಿ ಅಸುಖಿಯಾಗಿ ಅವನು ಒಂದು ಉತ್ತಮವಾದ ಸ್ಥಾನಕ್ಕೆ ಹೋಗಿದ್ದಾನೆ. ಪರಮಾತ್ಮನೊಂದಿಗೆ ವಾಸ ಮಾಡುತ್ತಿದ್ದಾನೆ."

ಕಿವಾಮುದೀನ್ ಎಂಬ ಇನ್ನೊಬ್ಬ ಪೋಷಕನು ತೀರಿಹೋದಾಗ ಹೀಗೆಂದು ಬರೆದನು.

"ಇವನೊಂದಿಗೆ ಈ ಕಠಿನ ಜಗತ್ತಿನಿಂದ ಕುಶಲಕಲೆಗಳ ಕೊನೆಯ ರಕ್ಷಕನು ತೀರಿಹೋದನು. ಇವನ ಸಾವಿನ ದಿನವು ನನ್ನ ಹೃದಯದಲ್ಲಿ ಬರೆದ ಹಾಗಾಗಿದೆ."

ಹಾಫೀಸನು ಮಗನನ್ನು ಕಳೆದುಕೊಂಡನು; ಆಗ ಒಂದು ಸಣ್ಣ ಕೃತಿಯನ್ನು ರಚಿಸಿದನು.

"ನಿದ್ರಿಸುವ ಕೂಸೆ, ವಸಂತವು ಬಂದಿತು. ಗುಲಾಬಿಯೂ ಸುಗಂಧ ರಾಜವೂ ಬರುವುವು. ನೀನು ಮಾತ್ರ ನೆಲದಲ್ಲಿ ನಿದ್ರೆಯಲ್ಲಿ ನಿಲ್ಲುವೆ. ನನ್ನ ಕಂದಾ.

ನಿದ್ರಿಸುವ ಮಗುವೆ, ವಸಂತವು ಬಂದಿತು, ವೈಶಾಖದ ಮೋಡ ಪೊಂದರಂತೆ ನಾನು ನಿನ್ನ ಗೋರಿಯ ಮೇಲೆ ಬಾಗಿ ಕಣ್ಣೀರನ್ನು ಸುರಿಸುವೆನು, ಓ ಸಣ್ಣ ಪುಷ್ಪವೆ.

ನಿದ್ರಿಸುವ ಕಂದಾ, ವಸಂತವು ಬಂದಿತು. ನನ್ನ ಅಳುವು ವ್ಯರ್ಥವಾಗದೆ ಇದ್ದರೂ ಇರಬಹುದು. ಅದರಿಂದ ನೀನು ಮತ್ತೆ ಎದ್ದರೂ ಏಳಬಹುದು, ಓ ಸಣ್ಣ ಮೊಗ್ಗೆ!"

ಮಾತೆಲ್ಲ ಸುಲಭ. ಅವುಗಳು ತೋರುವ ಖೇದವು ಅಗಾಧವಾದದ್ದು. ಈ ವ್ಯಥೆಯಲ್ಲಿ ವಿವೇಕವೂ ಸೇರಿದೆ. ಸಾವು ಜೀವನದ ಕೊನೆ ಅಲ್ಲವೆಂಬ ನಂಬಿಕೆಯೂ ಸೇರಿದೆ. ಇದು ಜೀವನದ ಸಾರವನ್ನರಿತ ಉತ್ತಮ ಕವಿಹೃದಯದ ನಿಜವಾದ ದುಃಖದ ಉತ್ತಮ ಫಲ

ಸುಖಕ್ಕೆ ಜೀವನದಲ್ಲಿ ಒಂದು ಉದ್ದೇಶವಿರುವಂತೆ ದುಃಖಕ್ಕೂ ಇದೆ. ಬದುಕಿನ ಸುಖಗಳು ಒಂದೊಂದಾಗಿ ಕಡಿಮೆಯಾಗಿ ದುಃಖಗಳು ಒಂದೊಂದಾಗಿ ಬೆನ್ನುಹಿಡಿದು ಬಂದರೆ ನಾವು ಬದುಕಬೇಕೆಂಬ ಆಸೆಯನ್ನು ಸ್ವಲ್ಪಸ್ವಲ್ಪ ಬಿಡುತ್ತ ಬರುವೆವು. ಈ ಅರ್ಥ ಬರುವಂತೆ ಹಾಫೀಸನು ಹೀಗೆಂದು ಬರೆದನು:—

"ಓ ನನ್ನ ಚಿಕ್ಕಂದಿನ ಜರತಾರಿಯ ವಸ್ತ್ರವೇ, ನಿನ್ನ ರೇಷ್ಮೆಯ ಚಿತ್ರಕೆಲಸವು ಎಷ್ಟು ಬೇಗ ಕಂದಿತು. ಎಷ್ಟು ಬೇಗ ಕಿತ್ತಿತು.

ಅಲ್ಲಿ ಅಲ್ಲಿ ಇರುವ ಸ್ವಲ್ಪ ಬಣ್ಣ ಹೊರತು ನಿನ್ನ ಪೂರ್ವದ ಸ್ಥಿತಿಯನ್ನು ತೋರಿಸುವ ಒಂದು ಚಿಹ್ನೆಯೂ ನಿನ್ನಲ್ಲಿ ಇಲ್ಲ."

ಹೀಗೆ ದುಃಖಗಳನ್ನು ನೋಡಿ ಕೊನೆಗೆ ಹಾಫೀಸನು ತನ್ನ ಮೃತ್ಯುವನ್ನು ಸಮಾಧಾನವಾಗಿ ಸ್ವೀಕರಿಸಿದನೆಂದು ತೋರುತ್ತದೆ. ಅವನು ಜೀವನದ ನೀತಿಸಾರವನ್ನು ಹೀಗೆಂದು ತಿಳಿಸಿದನು.

"ಆಕಾಶದ ಭಿತ್ತಿಯಲ್ಲಿ ನಕ್ಷತ್ರಗಳು ಸ್ವರ್ಣವರ್ಣಗಳಲ್ಲಿ ಈ ಮಾತುಗಳನ್ನು ಬರೆಯುತ್ತವೆ: ದಯಾಳುಗಳ ಒಳ್ಳೆಯ ಕೆಲಸಗಳು ನಾಶವಾಗುವುದಿಲ್ಲ; ಮಿಕ್ಕ ಎಲ್ಲವೂ ನಾಶವಾಗುತ್ತದೆ.

ಮುಗ್ಗಿದ ದೀಪದೊಂದಿಗೂ ರಾತ್ರಿಯ ಮಿಣುಕುಹುಳುವಿನೊಂದಿಗೂ ಕೊನೆಗಾಣುತ್ತದೆ."

ಸಾವು ಸನ್ನಿಹಿತವಾದಾಗ ಅವನು ಹೀಗೆಂದು ಒರೆದನು:—

"ಹಾಫೀಸ್, ಆನಂದಪಡು. ಅಗೋ, ಆ ಬಾಗಿಲಲ್ಲಿ ಕತ್ತಿಯನ್ನು ಸೆಳೆದು ನಿಂತಿರುವ ದೇವದೂತನನ್ನು ನೋಡು. ಅವನು ಈಗ ಮೃತ್ಯು. ಅವನೇ ಮೊದಲು ಜೀವ. ಅವನ ಪೆಟ್ಟಿಗೆ ಸಿಕ್ಕಿದವರು ಉದಯುವೆಂದರೆ ಅಂಜುವುದಿಲ್ಲ. ಅವರ ಹೃದಯವು ಆಮೇಲೆ ಖೇದವನ್ನು ಅರಿಯುವುದಿಲ್ಲ."

೨

ಹಾಫೀಸ್ ಕವಿಯು ತನ್ನ ಕವಿತಾ ಕಾರ್ಯದ ವಿಷಯದಲ್ಲಿ ಘನವಾದ ಅಭಿಪ್ರಾಯವನ್ನುಳ್ಳವನಾಗಿದ್ದನು. ಒಂದೊಂದು ಸಲ "ಎಲ್ಲರೂ ಉತ್ತು ಬಿತ್ತುತ್ತಿದ್ದಾರೆ, ನೀನು ಮಾತ್ರ ಸುಮ್ಮನೆ ಇದ್ದೀಯೆ" ಎಂದು ತನ್ನನ್ನು ಉದ್ದೇಶಿಸಿ ಹೇಳಿಕೊಂಡಿರುವನಾದರೂ ಒಟ್ಟಿನಲ್ಲಿ ಅವನು ಕವಿತೆಯು ಸಕಲ ಫಲಕ್ಕೂ ಸಾಧನವೆಂದು ಎಣಿಸಿದ್ದನು. ರಾಗಸಂಸ್ಕಾರವು ಎಲ್ಲ ಸಂಪತ್ತಿಗಿಂತಲೂ ದೊಡ್ಡದೆಂದು ತಿಳಿದಿದ್ದನು. ಒಂದು ಕಡೆ "ನಭೋಮಂಡಲದ ನಕ್ಷತ್ರಮಾಲೆಗಳನ್ನೆಲ್ಲಾ ಪ್ರೇಮವು ಒಂದು ಗುಲಗಂಜಿಗೆ ಕೊಂಡುಕೊಳ್ಳುವುದು" ಎಂದು ಹೇಳಿದ್ದಾನೆ. ತನ್ನ ಗೀತೆಯ ವಿಷಯದಲ್ಲಿಯೂ ಇವನಿಗೆ ಇದೇ ಅಭಿಪ್ರಾಯವಿತ್ತು. ತಾನು

ಗಾಯಕರ ರಾಜನು ಎಂದು ಹೇಳಿದ್ದಾನೆ. ಒಂದು ಸಲ ಅರ್ಧಹಾಸ
ದಲ್ಲಿ ಒಬ್ಬ ದೇವದೂತನು ಬಂದು ತನಗೆ ಹೀಗೆ ಹೇಳಿದಂತೆ ವರ್ಣಿ
ದ್ದಾನೆ—"ನಿನ್ನ ಸ್ಥಾನವು ನಿತ್ಯಸೂರಿ ಗೇಬ್ರಿಯಲನ ಜೊತೆಯಲ್ಲಿ
ಸಿತ್ರಾವೃಕ್ಷಗಳ ಶಾಖೆಗಳ ಮಧ್ಯದಲ್ಲಿ; ಸ್ವರ್ಗಲೋಕದ ಆವರ
ದಲ್ಲಿ." ತನ್ನ ಸಂತೋಷದ ಗಾನಗಳು ಎಷ್ಟು ಚೆನ್ನಾಗಿರುವುವೆಂದ
ತನ್ನ ಪ್ರಿಯೆಯು ಅವುಗಳನ್ನು ಕೇಳುವುದಕ್ಕೆ ಪರಲೋಕದಿಂ
ಹಿಂತಿರುಗಿ ಬರಬಹುದು. "ಕಾನನದ ಹೊಸ ಜೇನಿನಂತಿರುವ ಮಧು
ರಸದ ಈ ಗೀತೆಗಳನ್ನು ಯಾರು ಕೇಳಿದರೂ ಒಂದೊಂದು ಮಾತನ್ನೂ
ತಮ್ಮ ಹೃದಯದಲ್ಲಿ ಮತ್ತೆ ಮತ್ತೆ ಹಾಡುವರು." "ಹಾಫೀಸನ
ಹಾಡಿದ ಈ ಗೀತೆಗಳು ಎಷ್ಟು ನವ್ಯ ಎಷ್ಟು ಭವ್ಯವೆಂದರೆ ಪ್ರಪಂಚವ
ಮುದಿಯಾದಾಗ್ಗೆ ಇವು ಇನ್ನೂ ಯೌವನದಲ್ಲಿರುವುವು." ಸಂತೋಷದ
ಗಾನವು ಹೀಗೆ ಸಂತೋಷಕರವಾಗಿರುವಂತೆ ದುಃಖದ ಗಾನವು ದುಃಖ
ದಲ್ಲಿ ಅದೇ ಮೇರೆಯನ್ನು ಸೇರಿರುವುದು. "ನಿನ್ನ ಗಾನದ ಪಕ್ಕಗಳಿಂ
ರಕ್ತವು ತೊಟ್ಟಿಕ್ಕುತ್ತಿದೆ. ಇದಕ್ಕೆ ಕಾರಣವುಂಟು. ಒಂದೊಂದು ಸಣ್ಣ
ಮಾತಿಗೂ ನಿನ್ನ ಹೃದಯವು ಗಾಯಪಟ್ಟು ಉಸಿರಿಲ್ಲದೆ ದೀರ್ಘಕಾ
ನೋವನ್ನು ಸಹಿಸಿದೆ. ಒಂದೊಂದು ಮಾತೂ ನುಡಿಯುವುದಕ್ಕೆ
ಮೊದಲು ಬಹಳ ಕಣ್ಣೀರಿನ ಕಾಣಿಕೆಯನ್ನು ತೆಗೆದುಕೊಂಡಿದೆ." ಕವ
ದಿಂದ ಈ ಕವಿಗೆ ಆಗಾಗ ಸಮಾಧಾನ ಉಂಟಾಗುತ್ತಿತ್ತು. "ನನ್ನ
ಖೇದದ ಧ್ವನಿಯು ನನ್ನ ಕಿವಿಯಲ್ಲಿ ಅತಿ ಮಧುರವಾಗಿ ಪರಿಣಮಿ
ಕೊಂಚವರಲ್ಲೇ ನನ್ನ ನೋವು ಗಾನದಿಂದ ಮರೆಯಿತು" ಎಂದ
ಒಂದುಸಲ ಹೇಳುತ್ತಾನೆ. ಹೀಗೆ ತನ್ನ ಅನುಭವವನ್ನೇ ಕಾವ್ಯದ
ರೂಪುಗೊಳಿಸಿದ್ದರಿಂದ ಈತನ ಕಾವ್ಯವು ಭಾವಭರಿತವಾಗಿದೆ. "ನನ್ನ
ಗೀತೆಯು ಒಂದು ರಂಗಸ್ಥಳ; ನಾನು ನಟಸಮುದಾಯ; ನಾನೆ
ನಾಟಕವು. ಈ ಆಟವನ್ನು ನಾನೇ ಆಡುತ್ತೇನೆ; ನಾನೇ ನೋಡು
ತ್ತೇನೆ. ಎಂದಾದರೂ ಒಂದು ದಿನ ನನ್ನ ನಾಟಕಶಾಲೆಗೆ ಬುದ್ಧಿಯಿರು
ಮನುಷ್ಯನೊಬ್ಬನು ಬಂದು ನನ್ನ ಅರ್ಥವನ್ನು ಜನರಿಗೆ ತಿಳಿಸಿಕೊ
ಬಹುದು." ಇವನ ಗೀತೆಯು ಇವನ ಜೀವನದ ಹಾಸುಹೊಕ್ಕಾ

ಸೇರಿಹೋಯಿತು. ಸ್ವರ್ಗಕ್ಕೆ ಹೋಗುವಲ್ಲಿ ತಾನೂ ತನ್ನ ಗೀತೆಯೂ ಜೊತೆಯಾಗಿ ಹೋಗವುದಾಗಿ ಹೇಳುತ್ತಾನೆ. ಇಷ್ಟು ಉತ್ತಮವಾದ ಗೀತೆಯನ್ನು ಬರೆದು ಆತ್ಮಕ್ಕೆ ಸಂಸ್ಕಾರವನ್ನು ಉಂಟುಮಾಡಿ ಕೊಂಡದ್ದರಿಂದ ಹಾಫೀಸ್ ಕವಿಗೆ ತನ್ನ ಮುಂದಣ ಗತಿಯ ವಿಷಯ ದಲ್ಲಿ ಭಯವೇನೂ ಇರಲಿಲ್ಲ.

> “ ಹಾಫೀಸನ ಜೀವನವು ಭಗವಂತನು ದಯೆಯಿಂದ ಕೊಟ್ಟದ್ದು. ಭಗವಂತನಿಗೆ ಎಂದೋ ಒಂದು ದಿನ ನಾನು ಅದನ್ನು ಹಿಂದಕ್ಕೆ ಕೊಡು ತ್ತೇನೆ. ಹಾಫೀಸನು ತನ್ನ ಪರದೈವವನ್ನು ಕಂಡಾಗ್ಗೆ ಈ ಜೀವನವು ವ್ಯರ್ಥವಾಗಿ ಕಳೆಯಿತೆಂದು ದೇವರು ಹೇಳುವುದಿಲ್ಲ.”

ಹಾಫೀಸನ ಅನುಭವವೂ ತಿಳಿವಳಿಕೆಯೂ ನೀತಿಯೂ ಎಷ್ಟು ತೀವ್ರ ಎಷ್ಟು ಸ್ವಚ್ಛ ಎಷ್ಟು ವಿಸ್ತಾರವಾದುವು ಎಂಬುದು ಇದು ವರೆಗೆ ಎತ್ತಿ ಬರೆದಿರುವ ಕೆಲವು ಮಾತುಗಳಿಂದ ಸ್ವಲ್ಪಮಟ್ಟಿಗೆ ಸ್ಪಷ್ಟ ವಾಗಿರಬಹುದು. ರಾಗಗಳ ಸಂಸ್ಕಾರದಿಂದ ಪ್ರಯೋಜನ ಕಡಿಮೆ ಯೆಂದು ಹೇಳುವ ಬುದ್ಧಿಪಕ್ಷಪಾತಿಗಳಿಗೆ ಕಲಾಪಕ್ಷಪಾತಿಗಳು ಇವನ ಕವಿತೆಯನ್ನು ತೋರಿಸಿ, “ ಇಲ್ಲಿ ನೋಡಿ, ತತ್ತ್ವದಿಂದ ಯಾವ ಪರವಸ್ತು ವನ್ನು ನೀವು ಕಾಣುವೆವೆನ್ನುವಿರೋ ಅದನ್ನು ಈತನೂ ಆನಂದದಿಂದ ಅರಿತೆನೆನ್ನುತ್ತಾನೆ. ಸ್ವರ್ಗವು ಕೈಗೆ ಸಿಕ್ಕಿತೆಂದು ನೀವು ಎಷ್ಟು ಧೈರ್ಯ ವಾಗಿ ಹೇಳುವಿರೋ ಈತನೂ ಅಷ್ಟೇ ಧೈರ್ಯವಾಗಿ ಹೇಳುತ್ತಾನೆ” ಎಂದು ಹೇಳಬಹುದು. ಬೌದ್ಧಮತದಲ್ಲಿ ಪ್ರಾಯಶಃ ರಾಗಗಳಿಗೆ ಪ್ರಾಮುಖ್ಯ ಕಡಿಮೆ. ಈ ಮತದ ಗುರು ಒಬ್ಬನು ಚೀನಾದೇಶದಲ್ಲಿ ಒಂದುಸಲ ಉಪನ್ಯಾಸವನ್ನು ಕೇಳುವುದಕ್ಕೆಂದು ಹತ್ತಿರಕ್ಕೆ ಬಂದಿದ್ದ ಗುಂಪಿಗೆ ಧರ್ಮವನ್ನು ತಿಳಿಸುವುದಕ್ಕೋಸ್ಕರ ಎದ್ದುನಿಂತನಂತೆ. ಉಪನ್ಯಾಸವನ್ನು ಆರಂಭಿಸುವ ಮೊದಲ, ಪಕ್ಕದಲ್ಲಿದ್ದ ಒಂದು ಮರದ ಮೇಲೆ ಒಂದು ಸಣ್ಣ ಹಕ್ಕಿಯು ಹಾಡುವುದಕ್ಕೆ ಮೊದಲು ಮಾಡಿತು. ಉಪನ್ಯಾಸಕನು ಆ ಕಡೆ ಕಿವಿಗೊಟ್ಟು ಕೇಳುತ್ತಾ ಸುಮ್ಮನೆ ನಿಂತನು. ಸೇರಿದ್ದ ಜನವೂ ಪಕ್ಷಿಯ ಗಾನವನ್ನು ಕೇಳಿತು. ಗಾನವು ಮುಗಿದ ಮೇಲೆ ಉಪನ್ಯಾಸಕನು ಪೀಠದಿಂದ ಇಳಿದು “ನಾನು ಮಾಡಬೇಕಾ ಗಿದ್ದ ಉಪದೇಶವು ಆ ಪಕ್ಷಿಯಿಂದ ಆಯಿತು, ನಡೆಯಿರಿ” ಎಂದನಂತೆ.

ಈ ಮಾತು ಅನೇಕರಿಗೆ ಆಶ್ಚರ್ಯವನ್ನುಂಟುಮಾಡುವುದು. ಆದರೆ ಆ ಉಪದೇಶಕನಿಗೆ ಅದು ವಾಸ್ತವವಾದ ವಿಷಯವಾಗಿದ್ದಿರಬೇಕು. ಪ್ರಾಜ್ಞರಾದ ಇತರರನೇಕರು ಇದೇ ಅಭಿಪ್ರಾಯವನ್ನು ಸೂಚಿಸಿರುವು ದುಂಟು. ವರ್ಡ್ಸ್‌ವರ್ತ್ ಕವಿಯು

"One impulse from the vernal wood—
Will teach you more of man
Of moral evil and of good
Than all the sages can."

ಇಂಥ ಮಾತನ್ನು ನಾವು ಈಗ ಬಲ್ಲೆವು. ನೀತಿಯೆಂದು ಹೇಳಿ ಹತ್ತಾರು ಕಾರಣಗಳನ್ನು ಕೊಟ್ಟು ಲಂಬವಾದ ಉಪನ್ಯಾಸವನ್ನು ಮಾಡಿ ಉಪನ್ಯಾಸಕನು ಶ್ರೋತೃಗಳ ಮನಸ್ಸಿನಲ್ಲಿ ಒಂದು ಪರಿಣಾಮವನ್ನು ಉಂಟುಮಾಡುವನು. ಅದರ ಫಲವಾಗಿ ಅವರ ಆತ್ಮದಲ್ಲಿ ಯಾವುದೋ ಪರಿವರ್ತನಲೇಶವುಂಟಾಗುವುದು. ಆದರ ದೆಸೆಯಿಂದ ಅವರ ಮನಸ್ಸು ಆಮೇಲೆ ಸರಿಯೆನ್ನುವ ಒಂದು ದಾರಿಯಲ್ಲಿ ಹೋಗುವಂತೆ ಒಂದು ಪ್ರವೃತ್ತಿಯನ್ನು ಪಡೆಯುವುದು. ಒಂದು ಪಕ್ಷಿಯ ಇಂಪಾದ ಗಾನವನ್ನು ಮನಸ್ಸುಕೊಟ್ಟು ಕೇಳಿದರೂ ಆತ್ಮಕ್ಕೆ ಇದೇ ರೀತಿಯ ಸಂಸ್ಕಾರ ಉಂಟಾಗುತ್ತದೆ. ಇದೇ ಆ ಪ್ರಚಾರಕನ ಅಭಿಪ್ರಾಯ. ಯಾವ ಮನುಷ್ಯನು ಪ್ರಕೃತಿಯ ಸುಖಸೌಂದರ್ಯಗಳನ್ನು ಅನುಭವಿಸುವುದರಲ್ಲೂ ಅರಿಯುವುದರಲ್ಲೂ ಉದ್ಯುಕ್ತನಾಗುತ್ತಾನೋ ಅವನು ತನ್ನ ಆತ್ಮವನ್ನು ಸೃಷ್ಟಿಯ ಸತ್ಫಲದಾಯಕವಾದ ಗತಿಗೆ ಅನುಸಾರವಾಗಿ ನಿಲ್ಲಿಸುತ್ತಾನೆ. ಮತ್ತೆ ಮತ್ತೆ ಒಳ್ಳೆಯದನ್ನೇ ನೋಡಿ, ಒಳ್ಳೆಯದನ್ನೇ ಕೇಳಿ, ಒಳ್ಳೆಯದನ್ನೇ ಅಪೇಕ್ಷಿಸುವುದರಿಂದ ಸೂಚೀಕಲ್ಲು ಉತ್ತರಕ್ಕೆ ತಿರುಗಿ ನಿಲ್ಲುವಂತೆ ಇವನ ಮನಸ್ಸು ಒಳ್ಳೆಯದರ ಕಡೆಗೆ ತಿರುಗಿ ನಿಲ್ಲುವುದು. ವರ್ಡ್ಸ್‌ವರ್ತ್ ಕವಿಯು ಇನ್ನೊಂದು ಕಡೆ ಹೇಳಿರುವಂತೆ "Passions linked to forms so fair and stately, needs must have their share of noble sentiment." ನೀತಿಬೋಧೆಯು ಪ್ರಯಾಸದಿಂದ ಸಾಧಿಸುವ ಫಲವನ್ನು ಪ್ರಕೃತಿಯ ಸುಖಾನುಭವವು ಸುಲಭವಾಗಿ ಮತ್ತೊಂದು ದಾರಿಯಿಂದ ಸಾಧಿಸುವುದು.

Cultured emotions are essential.



ಹಾಫೀಸ್ ಕವಿಯ ಕಾವ್ಯದ ನಿಜವಾದ ಅರ್ಥವನ್ನು ತಿಳಿಯುವುದಕ್ಕೆ ಮೊದಲು ನಾವು ರಾಗ ಸಂಸ್ಕಾರವು ಹೀಗೆ ಪ್ರಮುಖವೆಂಬುದನ್ನೂ ಅದಕ್ಕೆ ಕಾವ್ಯವು ಒಂದು ಮುಖ್ಯ ಸಾಧನವೆಂಬುದನ್ನೂ ಒಪ್ಪಬೇಕು. ಹಾಗೆ ಒಪ್ಪದೆ ಇದ್ದರೆ ಅವನ ಕಾವ್ಯವನ್ನು ತತ್ತ್ವಬೋಧೆಗಾಗಿ ಬರೆದ ಉಪನ್ಯಾಸಮಾಲೆಯೆಂದು ನೆನೆದು ಅದನ್ನು ಸಮರ್ಥಿಸುವುದಕ್ಕಾಗಿ ಅವನ ಮಾತುಗಳಿಗೆ ವಿಲಕ್ಷಣವಾದ ಸಂಕೇತವನ್ನು ಆರೋಪಿಸುವೆವು; ಅಥವಾ ಕಾವ್ಯವು ದುಷ್ಟಕಾವ್ಯವೆಂದು ಅದನ್ನು ಅಲ್ಲಗಳೆಯುವೆವು. ಈ ಕವಿಯು ದುಷ್ಟಕಾವ್ಯವನ್ನು ಬರೆಯತಕ್ಕವನಲ್ಲ; ವಿಲಕ್ಷಣವಾದ ಸಂಕೇತಗಳನ್ನಿಟ್ಟು ಮಾತುಗಳಲ್ಲಿ ಒಗಟುಗಳನ್ನು ರಚಿಸುವವನೂ ಅಲ್ಲ. ಇವನಿಗೆ ಮನುಷ್ಯ ಜೀವನವು ಬಹಳ ನಿಜವಾದ ಅನುಭವ ಸಾಮಗ್ರಿಯಾಗಿತ್ತು. ಅಲ್ಲದೆ ಈ ಕಾರಣದಿಂದ ಈ ಜೀವನವು ಮುಗಿದಮೇಲೆ ಏನಿದೆ ಎಂಬ ವಿಷಯದಲ್ಲಿ ಇವನು ಕಾತರನಾಗಲಿಲ್ಲ. ಈ ಜೀವನದಲ್ಲಿ ಸಾಕಾದಷ್ಟು ಕೆಲಸವಿಟ್ಟುಕೊಂಡವರಿಗೆ ಮುಂದಕ್ಕೆ ಏನು ಗತಿ ಎಂದು ಹೆದರುವುದಕ್ಕೆ ಹೊತ್ತಿರುವುದಿಲ್ಲ. ಮುಂದೆ ಬರುವುದೆಂಬ ಸ್ವರ್ಗವು ಒಳ್ಳೆಯದು. ಆದರೆ ಅದನ್ನು ಸಂಪಾದಿಸಬೇಕು ಎನ್ನುವ ಕಾರಣದಿಂದ ಈ ಜೀವನವನ್ನು ಶುಷ್ಕವನ್ನಾಗಿ ಮಾಡಬೇಕು ಎಂದು ಇವನು ಒಪ್ಪಲಿಲ್ಲ. ಸ್ವರ್ಗವು ಬಂದಾಗ್ಗೆ ಅದರ ಸೌಂದರ್ಯವನ್ನು ಅನುಭವಿಸಬಹುದು; ಭೂಮಿಯಲ್ಲಿ ಇರುವಾಗ್ಗೆ ಇದರ ಸೌಂದರ್ಯವನ್ನು ಅನುಭವಿಸಬಹುದು. ಈ ಎರಡು ಅನುಭವಗಳು ಪರಸ್ಪರ ವಿರುದ್ಧವಲ್ಲ. ಚೆನ್ನಾಗಿ ನೋಡಿದರೆ ಮುಂದಕ್ಕೆ ಅನುಭವಿಸುವ ಶಕ್ತಿ ಇರಬೇಕೆನ್ನುವವರು ಈಗಣ ಅನುಭವದ ಶಕ್ತಿಯನ್ನು ಉಪಯೋಗದಿಂದ ಹರಿತವಾಗಿ ಇಟ್ಟಿರಬೇಕು. ಹೀಗೆ ಮಾಡುವುದರಲ್ಲಿ ಮನುಷ್ಯನು ಕೆಟ್ಟದಾರಿಗೆ ಹೋದರೆ ಏನು ಗತಿ ಎಂದು ಶಂಕೆಯಿಂದ ಅನುಭವಿಸದೆಯೇ ಇದ್ದರೆ, ಆ ಶಕ್ತಿಯು ನಷ್ಟವಾಗುವುದು. ಕೆಟ್ಟದಾರಿಗೆ ಹೋಗದಂತೆ ಎಚ್ಚರಿಕೆಯಿಂದ ನಡೆದುಕೊಳ್ಳುವುದು ಅವಶ್ಯಕ. ಹಾಗೆ ಒಂದೆರಡು ಸಲ ತಪ್ಪಿದರೂ ಅದರಿಂದ ಮುಂದಕ್ಕೆ ಜೀವನವು ಶುದ್ಧವಾಗುವುದಕ್ಕೆ ಅನುಕೂಲವೇ ಆಗುವುದು. "ಸ್ವರ್ಗದ ಬಾಗಿಲನ್ನು ತೆಗೆಯುವುದು

?

ಹೇಗೆ'' ಎಂದು ಕೇಳಿ ಕವಿಯು ''ಮದ್ಯದ ಪಾತ್ರೆಯಿಂದ ಆ ಬಾಗಿಲ ಮೇಲೆ ತಟ್ಟು ಬಾಗಿಲನ್ನು ತೆಗೆಯುವರು'' ಎಂದಿದ್ದಾನೆ. ಸ್ವರ್ಗದ ಬಾಗಿಲು ಮದ್ಯಪಾತ್ರೆ ಎಂದು ಒಂದೇ ಉಸುರಿನಲ್ಲಿ ಹೇಳುವ ಇವನ ಮಾತು ಕೇಳುವ ನಮಗೆ ಉದ್ಧತವಾದವೆಂದು ತೋರುವುದು. ಇವನ ಉದಾರವೂ ದೂರಗಾಮಿಯೂ ಆದ ದೃಷ್ಟಿಗೆ ಅದು ಅಷ್ಟು ವಿಚಿತ್ರವಾಗಿ ತೋರಲಿಲ್ಲ. ಪರಮಾತ್ಮನು ತನ್ನ ದ್ವಾರಪಾಲಕರು ತನ್ನನ್ನು ಅಗಲಿರಬೇಕಾದ ಸಂದರ್ಭದಲ್ಲಿ ''ನನ್ನ ಮಿತ್ರರಾಗಿ ಏಳು ಜನ್ಮ ಕಳೆದು ಬರುವಿರಾ ಶತ್ರುಗಳಾಗಿ ಮೂರು ಜನ್ಮ ಇದ್ದು ಬರುವಿರಾ'' ಎಂದು ಅವರನ್ನು ಕೇಳಿದನಂತೆ. ಶತ್ರುಗಳನ್ನು ಏಳುಜನ್ಮ ದೂರ ಇರಿಸುವುದು ಮಿತ್ರರನ್ನು ಮೂರು ಜನ್ಮದಲ್ಲಿ ಹತ್ತಿರ ಕರೆದುಕೊಳ್ಳುವುದು ನ್ಯಾಯವೆನ್ನಬಹುದು. ಶತ್ರುವಿಗೆ ಮೂರು ಜನ್ಮ ಮಿತ್ರರಿಗೆ ಏಳು ಜನ್ಮ ಎಂಬ ಗಣಿತಶಾಸ್ತ್ರದಲ್ಲಿ ಏನೋ ತಪ್ಪು ಇದೆಯೆಂದು ಹೇಳಬೇಕು. ಆದರೆ ಪುರಾಣದ ಈ ವಿಪರೀತ ವ್ಯವಸ್ಥೆಗೆ ಅರ್ಥವಿಲ್ಲದೆ ಇಲ್ಲ. ಭಗವಂತನ ಕಡೆ ಮನಸ್ಸು ತಿರುಗುವುದೇ ನಿಜವಾದರೆ ಕೊಂಚ ಕೊಂಚವಾಗಿ ಅವನ ವಿಷಯವನ್ನು ತಿಳಿದು ಅನೇಕ ಜನ್ಮಗಳಲ್ಲಿ ಅವನನ್ನು ಅಪೇಕ್ಷಿಸುವುದನ್ನು ಕಲಿಯುವುದಕ್ಕಿಂತ ಅವನಿಗೆ ವಿರೋಧವಾಗಿ ನಡೆಯುವುದಕ್ಕೆ ಯತ್ನಮಾಡಿ ಅದು ಎಷ್ಟು ದುಃಖಕ್ಕೆ ಕಾರಣವೆಂದು ತಿಳಿದು ಆ ಮೂಲಕ ಸನ್ಮಾರ್ಗ ಸತ್ಸಂಗ ಸದಾಚಾರದಲ್ಲಿ ವಿಶ್ವಾಸವನ್ನು ಪಡೆಯುವುದು ಶೀಘ್ರವಾದ ದಾರಿ. ಹಾಫೀಸ್ ಕವಿಯು ತನ್ನ ಕಾವ್ಯದಲ್ಲಿ ಈ ಭಾವವನ್ನು ಮತ್ತೆ ಮತ್ತೆ ಸೂಚಿಸಿದ್ದಾನೆ. ಕಾವ್ಯದ ಕೆಲಸವೇ ಇದು. ಸಾಮಾನ್ಯ ಮನುಷ್ಯನು ಜೀವನದ ಸಂಪೂರ್ಣಾರ್ಥವನ್ನು ತಿಳಿಯದೆ ನಿದ್ರೆಯಲ್ಲಿ ನಡೆಯುವಂತೆ ಜೀವನದಲ್ಲಿ ನಡೆಯುತ್ತಾನೆ. ಈ ಮಂಕುತನವನ್ನು ಹರಿಸಿ ಭಗವಂತನು ಕೊಟ್ಟಿರುವ ಎಲ್ಲಾ ಕರಣಗಳನ್ನೂ ವಿನಿಯೋಗಿಸುವಂತೆ ಮಾಡುವುದೇ ಕಾವ್ಯದ ಉದ್ದೇಶ. ಹೀಗೆ ಹಾಫೀಸ್ ಕವಿಯು ತನ್ನ ಅನುಭವವನ್ನು ವರ್ಣಿಸುವುದರಲ್ಲಿ ಉತ್ತಮ ಕಾವ್ಯವನ್ನು ಬರೆದು, ಕಾವ್ಯದ ಮುಖ್ಯೋದ್ದೇಶವನ್ನು ನೆರವೇರಿಸಿ ಸಾಹಿತ್ಯದಲ್ಲಿ ಮಹೋಪಕಾರವನ್ನು ಮಾಡಿದ್ದಾನೆ. ಉಪಕಾರವನ್ನು ಮಾಡುವುದ

ರಲ್ಲಿಯೂ ಒಂದು ಅವರ್ಣನೀಯವಾದ ಸರ್ವಾಂಗ ಸುಂದರವಾದ ರೂಪದಲ್ಲಿ ತನ್ನ ವಾಣಿಗೆ ಆಕಾರವನ್ನು ಕೊಟ್ಟು ಇದ್ದಾನೆ. ಇವನ ಕಾವ್ಯದ ಆರಂಭದಲ್ಲಿ ಹೀಗೆಂದು ಬರೆದಿದೆ:—

"ಇಂಥ ಗಾಯನಕ್ಕೆ ಯಾರ ಸ್ತೋತ್ರವೂ ಅವಶ್ಯಕವಿಲ್ಲ.
ಇಂಥ ಸೌಂದರ್ಯವು ಯಾರಿಗೂ ಮರೆಯಾಗಲಾರದು.
ಇಂಥ ಸೂರ್ಯನ ತೇಜೋರಾಶಿಗೆ ನಾನು ಒಂದು ದೀಪವನ್ನು
ಹಿಡಿಯಬೇಕಾದುದೇನು?

ಆದರೂ ತನ್ನ ಕಲ್ಪನೆಯ ಅಸ್ಪೃಷ್ಟ ಸುಕುಮಾರವಾದ ಸೊಬಗಿಗೆ
ಇಷ್ಟು ಅಪೂರ್ವವಾದ ಸುಂದರೀ ಸಮವಾದ ಲಾವಣ್ಯವನ್ನು
ಸ್ವಚ್ಛ ಹಿಮ ಕಣಗಳಿಂದಲೆಂಬಂತೆ ರಚಿಸಿದ ಆ ಲೇಖಣಿಗೆ
ನಾವು ವಂದನೆಗಳನ್ನು ಅರ್ಪಿಸುತ್ತೇವೆ.

ಕುಶಲವಾದ ಕಲೆಯು ಇದಕ್ಕೆ ಜತೆಯ ಕಾವ್ಯವನ್ನು ಕಾಣದು.
ಪ್ರಕೃತಿಯೂ ಇಷ್ಟು ಅಂದವಾದ ಊಹೆಯನ್ನು ಪಡೆಯಲಿಲ್ಲ.
ಇದು ಇಂದ್ರಜಾಲವೋ ದೇವದೇವನಿತ್ತ ಅದ್ಭುತ ಶಕ್ತಿಯೋ
ಅಥವಾ ಅವನ ಬಳಿಯ ನಿತ್ಯಸೂರಿಯ ಆನಂದ ಗೀತವೋ
ಸಾಧು ಗಾಯನವು ಹೇಗೆ ನೋಡಿದರೂ
ಒಂದು ಮಾಯೆಯೇ ಸರಿ."

ಹಾಫೀಸನ ಕಾವ್ಯವನ್ನು ಓದಿದವರಿಗೆ ಅವನ ವಿಷಯದಲ್ಲಿ ಇದು ಹೊರತು ಏನನ್ನು ಹೇಳುವುದಕ್ಕೂ ತೋರುವುದಿಲ್ಲ. 25th January

---

# ಮುದ್ದಣ ಕವಿಯ ಶ್ರೀರಾಮಾಶ್ವಮೇಧ

ಮುದ್ದಣ ಕವಿಯ ಕಾವ್ಯಗಳಲ್ಲಿ ಎಲ್ಲರಿಗೂ ಮೆಚ್ಚಿಗೆಯಾಗುವ
ಕಾವ್ಯವೆಂದರೆ ಶ್ರೀ ರಾಮಾಶ್ವಮೇಧ ಕಾವ್ಯವೆಂದು ಧಾರಾಳವಾಗಿ ಹೇಳ
ಬಹುದು. ಕಾವ್ಯವು ಸರ್ವಸಮ್ಮತವಾಗುವುದಕ್ಕೆ ಒಂದು ಕಾರಣ
ಅದು ಗದ್ಯರೂಪದಲ್ಲಿರುವುದು; ಗದ್ಯವಾದರೂ ಸತ್ವವಿಲ್ಲದ ಶೈಲಿಗೆ
ಬೀಳದೆ ಭಾವಗರ್ಭಿತವಾದ ಸುಂದರವಾದ ಮಾರ್ಗದಲ್ಲಿ ರಚಿತವಾಗಿರು
ವುದು. ಈ ಕಾರಣದಿಂದ ಪಾಮರರಿಗೆ ರಂಜಕವಾಗಿರುವ ಈ ಕಾವ್ಯವ
ಹಳಗನ್ನಡದಲ್ಲಿ ರಚಿತವಾಗಿರುವುದರಿಂದ ಪಂಡಿತರಿಗೂ ಮೆಚ್ಚಾಗಿದೆ
ಇವೆಲ್ಲಕ್ಕಿಂತ ಮುಖ್ಯವಾದ ಕಾರಣ, ಕತೆಯನ್ನು ಹೇಳುವುದರಲ್ಲಿಯೂ
ಪ್ರಕೃತಿಯ ಸೌಂದರ್ಯವನ್ನು ವರ್ಣಿಸುವುದರಲ್ಲಿಯೂ ಜೀವನದ
ತತ್ತ್ವವನ್ನು ವಿಮರ್ಶಿಸುವುದರಲ್ಲಿಯೂ ಪಾಠಕರ ಹೃದಯದಲ್ಲಿ ವಿವಿಧ
ಪರಿಣಾಮಗಳನ್ನು ಉಂಟುಮಾಡುವುದರಲ್ಲಿಯೂ ಈ ಕವಿಗೆ ಇರುವ
ಅಸದೃಶವಾದ ಶಕ್ತಿಯು ಇಲ್ಲಿ ಪೂರ್ಣಪರಿಪಾಕವನ್ನು ಹೊಂದಿರ
ಯೆನ್ನುವುದು. ಈ ಎಲ್ಲ ಕಾರಣಗಳಿಂದ ಈ ಕಾವ್ಯವು ಬಹುವಿಧವಾದ
ಪಾಠಕವರ್ಗಕ್ಕೆ ಮೆಚ್ಚಾಗಿ ಈತನ ಇತರ ಕಾವ್ಯಗಳಿಗಿಂತಲೂ ಇಷ್ಟ
ಅಲ್ಲದೆ ಕನ್ನಡ ಸಾಹಿತ್ಯದ ಒಂದೆರಡು ಕಾವ್ಯಗಳನ್ನು ಹೊರತು ಇತರ
ಎಲ್ಲ ಕಾವ್ಯಗಳಿಗಿಂತಲೂ ಹೆಚ್ಚಾಗಿ ಪಾಠಕರ ಆದರಣೆಯನ್ನು
ಸಂಪಾದಿಸಿದೆ.

ಗ್ರಂಥದ ಆರಂಭದ ದೃಶ್ಯದಲ್ಲಿಯೇ ಮುದ್ದಣನಿಗೆ ಕತೆ ಹೇಳ
ವುದರಲ್ಲಿ ಇರುವ ಬಹುವಿಧವಾದ ನೈಪುಣ್ಯವು ಚೆನ್ನಾಗಿ ವ್ಯಕ್ತವಾಗ
ವುದು. ಈ ನೈಪುಣ್ಯವನ್ನು ವ್ಯಕ್ತಪಡಿಸುವುದಲ್ಲದೆ ಈ ದೃಶ್ಯವ
ವಿಷಯವನ್ನು ಸುಂದರವಾಗಿ ಆರಂಭಿಸುತ್ತದೆ. ಅದನ್ನು ಇಲ್ಲಿ ಸೂಕ್ಷ್ಮ
ವಾಗಿ ಕೊಡಬಹುದು. ಮಳೆಗಾಲ ಬಂತು. ಕಾಲಪುರುಷನು ಗು
ವಿಹೀನನಾಗಿ ನಿಸ್ತೇಜನಾಗಿ ಜಡನಾಗಿರುವನು. ನವಿಲು ಸಂತೋಷ
ದಿಂದ ಮೈಯುಬ್ಬಿ ಕುಣಿಯುತ್ತಿದೆ. ಚಾತಕವು ಬಾಯ್ಬಿಟ್ಟು ಮಳೆಯ

ಹಸಿಗೆ ಕಾದಿದೆ. ಕೆಂಪೇರಿದ ಕಣ್ಣಿನ ಕೋಗಿಲೆಯು ಮಾವಿನಮರದ ಸೆಳೆಗೊಂಬಿನಲ್ಲಿ ಮೂಗನಂತಿದೆ. ಈ ರೀತಿಯಲ್ಲಿ ಸಂಪ್ರಾಪ್ತವಾದ ವರ್ಷಾಕಾಲದಲ್ಲಿ ಒಂದು ದಿವಸ

"ಬೈಗುಂಬೊೞ್ತಿನೊಳೆಂದಿನಂತಿರೋಲಗಂ ಪರಿಯೆ ಕಬ್ಬಿಗರ ಬಲ್ಲಹಂ ಮುದ್ದಣನರಮನೆಯಿಂ ಪೊಱಮಟ್ಟು ನೆರೆವೀದಿವಿಡಿದು ಪೂರೆ ವೀಡಿಂಗೈತರ್ಪುದುಮಾತನ ಮಡದಿ ಮನೋರಮೆ ದೂರದೆ ಕಂಡೆೞ್ದಿದಿರ್ವಂದು ಕಾಲ್ಗೆ ನೀರಂ ನೀಡಿ ಮತ್ತಂ ಕೈವಿಡಿದೊಳಚೌಕಿಗುಯ್ದು ಮಣೆಯಿತ್ತು ಕುಳ್ಳಿರಿಸಿ ಒಡನೆಯೆ ತನಿವಣ್ಣಂ ತಿನಲಿತ್ತು ಕೆನೆವಾಲಂ ಕುಡಿ ಪೊಡಿತ್ತು ಉಪಚರಿಸುತಿರ್ದಳ್."

ಕವಿಯು ಕತೆಯನ್ನು ಹೀಗೆ ಆರಂಭಿಸುವನು. ಈ ಆರಂಭದ ಚಿತ್ರದ ಸೊಗಸನ್ನು ವರ್ಣಿಸಿ ಹೇಳಬೇಕಾದದ್ದಿಲ್ಲ. ಇದರಲ್ಲಿ ಪ್ರಕೃತಿಯ ವರ್ಣನೆ ಸೇರಿದೆ. ಒಂದು ಆಸ್ಥಾನವೂ ಅದಕ್ಕೆ ಸಂಬಂಧಪಟ್ಟ ಒಡ್ಡೋಲಗವೂ ಸೂಚಿಸಲ್ಪಟ್ಟಿವೆ. ಅರಮನೆಯಲ್ಲಿ ಸಂಭಾವಿತನಾಗಿರುವ ಕವಿಯ ಪರಿಚಯವನ್ನು ನಾವು ಮಾಡಿಕೊಳ್ಳುತ್ತೇವೆ. ಅವನ ಸಂಸಾರದ ಭವ್ಯ ಸುಖದ ಒಂದು ಭಾಗವನ್ನು ಸ್ವಲ್ಪಮಟ್ಟಿಗೆ ನೋಡುತ್ತೇವೆ. ಇದಿಷ್ಟರಿಂದ ನಮಗೆ ಕವಿಯ ವಿಷಯದಲ್ಲಿ ಮರ್ಯಾದೆಯೂ ಅವನ ಪತ್ನಿಯ ವಿಷಯದಲ್ಲಿ ಗೌರವ ವಿಶ್ವಾಸಗಳೂ ಉಂಟಾಗುತ್ತವೆ. ಏಕೆಂದರೆ ಅವನು ಮಾನ್ಯನಾದ ಕವಿ; ಈಕೆ ಸಂಪ್ರದಾಯವಂತೆಯಾದ ಪತಿಪರಾಯಣೆಯಾದ ಅವನ ಗೃಹಲಕ್ಷ್ಮಿ. ಸ್ವಪ್ನದಲ್ಲಿ ಕಂಡ ಯಾವುದೋ ಸುಂದರವಾದ ಸನ್ನಿವೇಶವು ಇಲ್ಲಿ ಕವಿಯ ಜೀವನದಲ್ಲಿ ನಮ್ಮೆದುರಿಗೆ ಬಂದಂತೆ ನಮಗೆ ಭಾವನೆಯುಂಟಾಗುತ್ತದೆ. ಹೀಗೆ ತನ್ನ ಮತ್ತು ತನ್ನ ಪತ್ನಿಯ ವಿಷಯವನ್ನು ಸ್ವಲ್ಪ ಸೂಚಿಸಿ ಕವಿಯು ಮುಂದಕ್ಕೆ ಹೀಗೆ ಹೇಳುತ್ತಾನೆ:—

"ಈವುಪಚಾರದಿನಾತನ ಪಸಿವುಂ ಬೞಲ್ಕೆಯುಂ ಮುಡಿಯೆ ಕೆಳದಿ ನಱುಂಬುಲವುಂ ಸವಿಯಲ್ಕೆಂದು ಮಡಿದೀಯುತುಮಿರೆ ಇಂತು ಸುಖಸಲ್ಲಾಪಂಗೊಳ್ಳುತ್ತಿರ್ದರ್.

ಅದೆಂತೆನೆ:—

ಮನೋರಮೆ—(ಮೆಲ್ನುಡಿಯಿಂ) ನೋೞ್ಪು ದೀಪಗಲ್ಗಳೆಂತೊ ಪಿರಿಯವು ಪಗಲುಮಿರುಳುಂ ಸುರಿವ ಬಲ್ಸೋನೆಯು ಜಿನುಂಗಿನತ್ತಣಿನೆನ್ನ

ಬಗೆಯುಂ ಬೇಸತ್ತುದು ಅಂತದಱಿಂನೀನಾನುಮೊಂದು ನಲ್ಗತೆಯುಂ ಪೇೞ್!

ಮುದ್ದಣಂ—ಪ್ರಾಣೇಶ್ವರೀ! ತಡೆಯೇಂ! ಇನಿತೊಂದು ಬಯಕೆ ತಲೆದೋಱಿತೆ ಆವ ಗಹನಂ? ಆದೊಡಮಾವ ನಲ್ಗತೆಯಂ ಪೇೞ್ವೆಂ? ಏಂ ಭೋಜಪ್ರಬಂಧಂ? ವಿಕ್ರಮವಿಜಯಂ? ಮಹಾವೀರಚರಿತಂ?

ಮನೋರಮೆ—ಇಸ್ಸಿ! ಇವರೊಳೆನಗೞ್ಕಱಿಲ್ಲಂ; ಉೞಿದೊಡಮುೞಿದೊಡಂ ಬಟ್ಟೆದೋಱಿಪ ರಸಭರಿತಂ ಚರಿತಮೈಸೆ.

ಮುದ್ದಣಂ—ನಿನಗಾವ ರಸದೊಳಿಷ್ಟಂ? ಶೃಂಗಾರರಸದೊಳೇ? ವೀರರಸದೊಳೇ? ಹಾಸ್ಯರಸದೊಳೇ?

ಮನೋರಮೆ—ಆವ ರಸದೊಳೆಂದೊಡೇಂ? ನವರಸದೊಳಂ.

ಮುದ್ದಣಂ—ಅಂತಿರೆ ಮತ್ತಮಾ ಕತೆಯಾವುದು?

ಮನೋರಮೆ—ರಾಮಾಯಣದೊಳೇನಾನುಮೊಂದು.''

ಈ ಕವಿಗೆ ರಾಮಾಯಣದ ವಿಷಯದಲ್ಲಿ ಬಹಳ ಪಕ್ಷಪಾತ. ಇವನ
ಮುಖ್ಯವಾದ ಮೂರು ಕಾವ್ಯಗಳೂ ರಾಮಾಯಣದಿಂದ ಉದ್ಧರಿಸಿದ
ಆಖ್ಯಾನಗಳು. ಕವಿಯು ಜನಾಂಗದ ಪ್ರತಿನಿಧಿಯೆಂದು ವಿಮರ್ಶೆಯಲ್ಲಿ
ಹೇಳುವುದು ವಾಡಿಕೆ. ಮುದ್ದಣನ ಈ ಪಕ್ಷಪಾತಕ್ಕೆ ವಿಮರ್ಶೆಯ
ಈ ಸೂತ್ರವು ಸುಲಭವಾಗಿ ಅನ್ವಯಿಸುವುದು. ನಮ್ಮ ಜನಾಂಗದ
ಜೀವನದಲ್ಲಿ ಆಳವಾಗಿ ಊರಿರುವ ಪುಣ್ಯಕಥೆಯೆಂದರೆ ರಾಮಾಯಣ
ವೆಂದೇ ಹೇಳಬಹುದು. ಇದರಿಂದಲೂ ನಮಗೆ ಈ ಕಾವ್ಯದ ವಿಷಯ
ದಲ್ಲಿ ಆದರವು ಮೊದಲಲ್ಲೇ ತಲೆದೋರುವುದು. ಅಲ್ಲದೆ ನಮಗೆ ಸಹಾಯ
ವಾಗಿ ಮನೋರಮೆ ನಿಂತಿವಾಳೆ. ನಮಗೂ ಎಲ್ಲ ರಸಗಳಲ್ಲೂ ಇಷ್ಟ
ನಮಗೆ ಬೇಕಾದದ್ದನ್ನು ಮನೋರಮೆ ಕೇಳಿರುವಳು. ಇನ್ನು
ಮುಂದೆಯೂ ಕತೆಯು ಸಾಮಾನ್ಯರಾದ ನಮ್ಮ ಯೋಗ್ಯತೆಗೆ ತಕ್ಕುದಾ
ಗಿರುವಂತೆ ಅವಳು ನೋಡಿಕೊಳ್ಳುವುದಕ್ಕೆ ಕಾವಲಿರುತ್ತಾಳೆ. ರಾಮಾ
ಯಣದಲ್ಲಿ ಯಾವ ಭಾಗವನ್ನು ಹೇಳುವುದೆಂದು ಸ್ವಲ್ಪ ಚರ್ಚೆಯಾ
ಮೇಲೆ ಮನೋರಮೆಯು ರಾಮಾಶ್ವಮೇಧದ ಕತೆಯನ್ನು ಕೇ
ಬೇಕೆಂದು ಹೇಳುವಳು. ಮುದ್ದಣನು ಆಗಲಿ, ಯಾವ ಧಾಟಿಯ
ಹೇಳಲಿ? ಪದ್ಯದಲ್ಲಿ ಹೇಳಲೆ? ಗದ್ಯದಲ್ಲಿ ಹೇಳಲೆ? ಎನಲು ಮನೋ

ರಮೆಯು—“ಪದ್ಯಂ ವಧ್ಯಂ; ಗದ್ಯಂ ಹೃದ್ಯಂ; ಹೃದ್ಯಮಪ್ಪ ಗದ್ಯದೊಳೆ ಪೇೞ್ವುದು” ಎಂದು ಉತ್ತರ ಕೊಡುವಳು. ಮುದ್ದಣನು ಸರಸಿ; ಇನ್ನೂ ಚಿಕ್ಕವಯಸ್ಸೆಂದು ಕಾಣುತ್ತದೆ. ಹೆಂಡತಿಯೊಡನೆ ಇಲ್ಲಿ ಸ್ವಲ್ಪ ಹಾಸ್ಯಮಾಡುತ್ತಾನೆ.

ಮುದ್ದಣಂ—(ನಸುನಗೆಯಿಂ) ಅದಂತಿರ್ಕೆ. ಇಂತಪ್ಪ ನಲ್ಗತೆಯಂ ಬಿತ್ತರಿಸಿದೊಡೆ ಅರಮನೆಯೊಳ್ ರನ್ನಗಡಗನುಂ ಪೊನ್ನಕಂಠಿಕೆಯುಂ ಮೆಚ್ಚುನೀವರ್ ನೀನೀವುದೇಂ?

ಮನೋರಮೆ—ಪೆಱತೇಂ ಎನ್ನನೇ ನಾನೀವೆಂ.

ಮುದ್ದಣನು ಕವಿಯಾದರೂ ಪ್ರಪಂಚಜ್ಞಾನವಿಲ್ಲದವನಲ್ಲ. “ಅಱಿಯಾ ಮುನ್ನಮೆ ನಿನ್ನ ತಾಯ್ತಂದೆವಿರೆನಗಿತ್ತರೆಂಬುದಂ?” ಎನ್ನುವನು. ಅದಕ್ಕೆ ಮನೋರಮೆಯು ಅರಮನೆಯವರು ಕಾವ್ಯವನ್ನು ನೋಡಿದಮೇಲಲ್ಲವೆ ಬಿರುದನ್ನು ಕೊಡುವುದು, ತಾನೂ ಕತೆಯನ್ನು ಕೇಳಿ ಚೆನ್ನಾಗಿದ್ದರೆ ಬಲ್ಲಂತೆ ಸನ್ಮಾನಿಸುವುದಾಗಿ ಹೇಳುವಳು.

ಮುದ್ದಣಂ—ಒಳ್ಳಿತೊಳ್ಳಿತು! ಕತೆಯನಾಲಿಸಿ ಬೞಿಕ್ಕ ಮಾಯೆನೆಂದೊಡೆಬಿಡೆ ನೋೞ್ಪೆಂ.

ಮನೋರಮೆ—“ಆನುಂ ನೋೞ್ಪೆಂ ಕತೆಯ ಪುರುಳೆಂತಿರ್ಕುಮೆಂದು.

ಹೀಗೆ ಒಪ್ಪಂದವಾದಮೇಲೆ ಕವಿಯು ಕಾವ್ಯವನ್ನು ಆರಂಭಿಸುವನು. “ಸ್ವಸ್ತಿ ಶ್ರೀಮತ್ಸುರಾಸುರೇಂದ್ರ ನರೇಂದ್ರ ಮುನೀಂದ್ರ ಫಣೀಂದ್ರ ಮಣಿಮುಕುಟತಟಘಟಿತ..” ಈ ಮಾತಿನ ಆಡಂಬರವನ್ನು ಕೇಳಿ ಮನೋರಮೆಯು “ಓ ಓ! ತಡೆ! ತಡೆ! ವಸುಧೆಗೊಡೆಯನಪ್ಪ ರಾಮಚಂದ್ರನ ಕತೆಯಂ ಪೇೞ್ವೆನೆ ಬಸದಿಗೊಡೆಯರಪ್ಪ ಸುರೇಂದ್ರರ ಚರಿತೆಯಂ ಪೇೞ್ವುದೇಂ? ಸಾಲ್ಗುಂ, ಸಾಲ್ಗುಂ. ಇಂತೆರ್ದೆಗೊಳ್ವ ಕತೆಗೆಂತುಡುಗೊಱೆಯಂ ಗೆಯ್ವೆನೋ!” ಎಂದು ಹೇಳುವಳು. ಮುದ್ದಣನು ರಾಮಚಂದ್ರನ ಕತೆಯನ್ನು ಹೇಳುವ “ಸಕ್ಕದದೊಂದು ಚಲ್ವು ಇದು” ಎಂದು ಹೇಳುವನು. ಕೇವಲ ಪಾಂಡಿತ್ಯಪ್ರದರ್ಶಕವಾದ ಸಂಸ್ಕೃತ ಶಬ್ದ ಭೂಯಿಷ್ಠವಾದ ಕನ್ನಡದ ಶೈಲಿಯು ನಮ್ಮ ಕಾವ್ಯಗಳಲ್ಲಿ ಹೊಸದಲ್ಲ. ಈಗಣ ಜನರಿಗೆ ಅಂಥ ಶೈಲಿಯ ವಿಷಯದಲ್ಲಿ

ಎಷ್ಟು ಬೇಸರ ಎಂಬುದು ಸರ್ವವಿದಿತವಾಗಿದೆ. ನಾವು ಯಾರಾದರೂ ಹೇಳುವಂತೆ ಮನೋರಮೆಯು "ಲೇಸು, ಲೇಸು! ಸೀರಿಪೀಯದ ಗಂಟಲೊಳ್ ಕಡುಬಂ ತುಱುಕಿದಂತಾಯ್ತು; ಕನ್ನಡದ ಸೊಗಸ ನಱಿಯಲಾರ್ತೆಸಿಲ್ಲೆನಗೆ ಸಕ್ಕದದ ಸೊಗಸಂ ಪೇೞ್ವುದು ಗಡ!" ಎಂದು ಹೇಳುವಳು.

ಮುದ್ದಣಂ—ಅಪ್ಪೊಡಿನ್ನೆಂತೊ ಒರೆವೆಂ.

ಮನೋರಮೆ—ತಿರುಳ್ಗನ್ನಡದ ಬೆಳ್ನುಡಿಯೊಳ್ ಪುರುಳೊಂದೆ ಪೇೞ್ವುದು; "ಕನ್ನಡಂ ಕತ್ತುರಿ"ಯಲ್ತೆ.

ಮುದ್ದಣಂ—ಅಪ್ಪುದಪ್ಪುದು. ಆದೊಡಂ (ಸಕ್ಕದವೊಂದೆ ರನ್ನವಣಿಯಂ ಪೊನ್ನಿಂಬಿಗಿದಂತೆಸೆಗುಂ) ಅದಱಿಂ ಕರ್ಮಣಿಸರದೊಳ್ ಚೆಂಬವಳಮಂ ಕೋದಂತಿರೆ, ರಸವೊಸರೆ, ಲಕ್ಕಣಂ ಮಿಕ್ಕಿರೆ, ಎಡೆಯೆಡೆಯೊಳ್ ಸಕ್ಕದದ ನಲ್ನುಡಿ ಮೆಱೆಯೆ ತಿರುಳ್ಗನ್ನಡದೊಳ್ ಕತೆಯನುಸಿರ್ವೆಂ ಎಂದು ಮಾತುಕೊಡುವನು.

ಕತೆಯ ಈ ಪ್ರಸ್ತಾವನೆಯಲ್ಲಿ ಕವಿಯು ಸೌಂದರ್ಯದ ವರ್ಣನೆಯಿಂದ ವಾಠಕರ ಮನಸ್ಸನ್ನು ರಂಜಿಸಿ ತನ್ನ ಸಂಸಾರದ ಸುಖದ ದಿಗ್ದರ್ಶನದಿಂದ ಅವರಿಗೆ ನೆಮ್ಮದಿಯನ್ನುಂಟುಮಾಡಿ ಮನೋರಮೆಯ ಮೂಲಕ ಅವರ ಇಷ್ಟವನ್ನು ಕುರಿತು ಪ್ರಸಂಗಮಾಡಿ ಸ್ವಲ್ಪ ಹಾಸ್ಯದಿಂದ ಉಲ್ಲಾಸವನ್ನುಂಟುಮಾಡಿ ಒಂದೆರಡು ಮಾತಿನಲ್ಲಿ ಇಂಥ ಕಾವ್ಯವು ಹೇಗಿರಬೇಕೆಂದು ಸೂಚಿಸಿ ಕನ್ನಡಕ್ಕೆ ಮರ್ಯಾದೆಯನ್ನು ಪ್ರಕಾಶಪಡಿಸಿ ಸಂಸ್ಕೃತದ ವಿಷಯದಲ್ಲಿ ಅವಜ್ಞತೆಯನ್ನು ತೋರದೆ ಸುಂದರವಾದ ಕಾವ್ಯವನ್ನು ರಚಿಸುವುದೆಂಬ ಪ್ರತಿಜ್ಞೆಯನ್ನು ತಿಳಿಸಿರುವನು. ಈ ಪ್ರತಿಜ್ಞೆಯನ್ನು ಎಷ್ಟು ಚೆನ್ನಾಗಿ ನೆರವೇರಿಸುವನೆಂಬುದು ಕಾವ್ಯವನ್ನು ಓದಿದವರಿಗೆ ತಿಳಿಯುವುದು.

ಇನ್ನು ಮುಂದೆ ಮುದ್ದಣ-ಮನೋರಮೆಯರ ಇನ್ನೂ ಕೆಲವು ಸರಸಸಲ್ಲಾಪಗಳನ್ನು ಎತ್ತಿ ಹೇಳುತ್ತೇವೆ. ಈ ಮಧ್ಯೆ ಕವಿಯ ಪ್ರಕೃತಿ ಸೌಂದರ್ಯದ ವರ್ಣನೆಯ ಶಕ್ತಿಯನ್ನು ತೋರಿಸುವಂತೆ ಒಂದು ಕಾವ್ಯ ಭಾಗವನ್ನು ಇಲ್ಲಿ ಕೊಟ್ಟಿದೆ. ವಸಂತಋತು ಆರಂಭವಾಗಲು ರಾಮ

ದೇವರು ಯಜ್ಞಮಾಡುವುದಕ್ಕೆ ಆರಂಭಿಸಿದರೆಂಬ ಸಂದರ್ಭದಲ್ಲಿ ಕವಿಯು ವಸಂತಋತುವನ್ನು ಹೀಗೆಂದು ವರ್ಣಿಸಿದ್ದಾನೆ:—

"ಮಾಮರನೆಳದಳಿರ ರಸಮಂ ಪೀಱಿದು ಕಳಕಂಠನ ಕಂಠನಾಳಕ್ಕೆಱೆದುಬ್ಬಸಮಂ ಕಳೆದು ಕಲನಾದಮಂ ಪೆರ್ಚಿಸಿಯುಂ, ಅರನೇಱಿಲದೋರೆವಣ್ಣಂ ತೀದು ನಕ್ಕಿಸುತರಗಿಳಿಯ ನಾಲಗೆಯಂ ತೆಳ್ಳನಾಗಿಸಿ ತೊದಳ್ನುಡಿಯಂ ತಿರ್ದಿಯುಂ, ಪುಷ್ಪಧೂಳಿಯುಂಲೆಪ್ಪಂ ಬಱಿದದಿಮುರ್ತ್ತೆಯ ಸುರಯಿಯ ಪೊಸಬಂಡನೊಡಲ್ಗಿತ್ತು ಮಱಿದುಂಬಿಗಳ್ಗೆ ಸಂಪಿಗೆಯತ್ತಣಿನೊದವಿದ ಶಿರೋಭ್ರಮಣಮನಱಿಯಿಸಿಯುಂ, ಬಸಂತಂ ಬೆಜ್ಜನೆನೆಮೈದೋಱಿಲೊಡಂ; ಅಂದು ಕೋಡುಕೋಡಿಂದೋಡಿ ಮಲಯಮಂ ಮಱಿತೆಗೊಂಡ ಪವನನೀಗಳತ್ತಣಿಂ ಪೊಱಮಟ್ಟು ಮೆಲ್ಲಮೆಲ್ಲನೆಡೆಯೆಡೆಯ ಬನಬನಮಂ ಪುಗುತಂದು ಹೊಂಚಿ ಮುಂಚಿ ಕೆಳೆಯಂಗೆ ನೆರೆವಾದನೆನೆ ದಕ್ಷಿಣಾನಿಲಂ ಮಂದಂ ಮಂದಂ ವಹಿಸುತ್ತಿರ್ಕುಂ; ಫಲವೃಕ್ಷಂಗಳೆಲ್ಲಂ ಕಾಯ್ಕು ಸುಗರ್ಗಳುಳ್ಪಣ್ದೋರೆವಣ್ ತನಿವಣ್ಗಳಿಂದೆಸೆಯೆಯುಂ, ಪೂವಳ್ಳಿಗಳ್ ನನೆ ಕ್ಕೊನೆಮುಗುಳರೆಮುಗುಳ್ ಬಿರಿಮುಗುಳುಳ್ಳಲರ್ದ ಪೊಸಮಲರ್ಗಳಿಂದೆ ಸೊಗಯಿಸೆಯುಂ, ಮನೋಹರಮಾಯ್ತು ಪೊಸ ಸುಗ್ಗಿ; ಬಿರಯಿಗಳೆರ್ದೆವಡಿ ಬಿಱಿನೆ ಬಿರಿಯೆ, ಐಟವಿತಾನಕ್ಕೆ ಪೊಸಬೇಟದ ಸೊಂಪು ನೆರೆಯೆ, ಕುಲಟಾಂಗನೆಯರ್ಗೆ ಜವ್ವನದೇಱಿತ್ಗೆ ಮೆಱಿತೆಯೆ, ಕಾವನೆತ್ತಂ ಮೈದೋಱಿದೆ ಸಂಚರಿಸಲ್ತೊಡಂಗಿದಂ; ರಾಘವನ ಪ್ರತಾಪದಂತಿರೆ ನೇಸಱಿ ಕಾಯ್ಪುಂ ಪೆರ್ಚಿದುದು; ಪುರಲಕ್ಷ್ಮಿಯೊಡನೆ ವನಲಕ್ಷ್ಮಿಯ ಕೆಳೆತನಂ ಪಿರಿದಾಯ್ತು."

ಈ ವರ್ಣನೆಯಲ್ಲಿ ಕವಿಯ ಊಹೆಯು ಅವನ ವಸ್ತುವಿಜ್ಞಾನಕ್ಕೆ ವಿಲಕ್ಷಣವಾದ ಕಳೆಯನ್ನು ಕಟ್ಟಿದೆ. ಮರಿದುಂಬಿಗಳು ತಿಳಿಯದೆ ಸಂಪಿಗೆಯ ಹತ್ತಿರ ಹೋಗಿ ಶಿರೋಭ್ರಮಣ ಉಂಟಾಗಿ ತೊಂದರೆಪಡುತ್ತಿವೆಯಂತೆ. ವಸಂತನು ಬಂದು ಅವಕ್ಕೆ ಪುಷ್ಪಧೂಳಿಯನ್ನು ಲೇಪಿಸಿ ಅದಿಮುರ್ತ್ತೆ 'ಸುರಗಿ ಪುಷ್ಪಗಳ ಹೊಸ ರಸವನ್ನು ಸೇವಿಸುವುದಕ್ಕೆ ಕೊಟ್ಟು ಆ ಭ್ರಾಂತಿಯನ್ನು ನಿವಾರಣೆ ಮಾಡುತ್ತಾನಂತೆ. ಇರುವುವನ್ನು ತಿಳಿಯುವುದು ವಸ್ತುವಿಜ್ಞಾನ. ವಿಜ್ಞಾನಾಂಶವನ್ನು ಪರೋಕ್ಷಾವಸ್ಥೆಯಲ್ಲಿ ಕಣ್ಣೆದುರಿಗೆ ಕಂಡಂತೆ ಅನುಭವಿಸುವುದು ಪ್ರತಿಭೆ. ಪ್ರತಿಭೆಯಿಂದ ಮುಂದೆ ಬಂದ ವಿಜ್ಞಾನಾಂಶಕ್ಕೆ ಆತ್ಮೀಯವಾದ ಒಂದು ವಿಲಾಸವನ್ನು ಆರೋಪಿಸಿ ಅದರ ಅಂದವನ್ನು ಹೆಚ್ಚಿಸುವುದು ಊಹೆ.

ಈ ವರ್ಣನೆಯಲ್ಲಿ ಈ ಮೂರು ರೀತಿಯ ಶಕ್ತಿಯೂ ಉಜ್ವಲವಾಗಿ ಕಾಣುತ್ತದೆ. ಹಾಗೆಯೇ ದಕ್ಷಿಣಾನಿಲನ ವರ್ಣನೆಯನ್ನು ನೋಡಿ. ಆ ವರ್ಣನೆಯ ಕೊನೆಯಲ್ಲಿ "ಮಂದಂ ಮಂದಂ ವಹಿಸುತಿರ್ದಂ" ಎಂದು ಹೇಳುವಲ್ಲಿ ತೆಂಗಾಳಿಯ ಧೀರಗಮನವು ರೂಪುಗೊಂಡಿರುವುದನ್ನು ನೋಡಿ. ಕಾವ್ಯಪ್ರಪಂಚದಲ್ಲಿ ಸುಳಿದಾಡಿರುವ ಮನಸ್ಸಿಗೆ ಸಂಸ್ಕೃತ ಕಾವ್ಯಗಳಲ್ಲಿ ಅನೇಕಕಡೆ ಬಂದಿರಬೇಕಾದ ಈ ಪದಸಂಯೋಜನದಿಂದ ತೋರಿಬರುವ ಭಾವನಾಪ್ರಪಂಚದ ವಿಸ್ತಾರವೆಂಥದೆಂದು ಊಹಿಸಿ. ಇದಿಷ್ಟರ ಜತೆಗೆ ಇಲ್ಲಿ ಜೋಡಿಸಿರುವ ಮಾತುಗಳ ಸೊಗಸನ್ನೂ ಔಚಿತ್ಯವನ್ನೂ ಗಮನಿಸಿ. ಬಿರಿಯೆ, ನೆರೆಯೆ, ಮೆರೆಯೆ ಎಂದು ಮಧ್ಯದಲ್ಲಿ ಅವ್ಯಕ್ತ ಮಧುರವಾಗಿ ಸೇರಿಬರುವ ಅಂತ್ಯಪ್ರಾಸದ ಸೊಗಸನ್ನು ಭಾವಿಸಿ. ಆಮೇಲೆ ಈ ವರ್ಣನೆಯು ಉತ್ತಮ ಕವಿತೆಯ ಸರ್ವಲಕ್ಷಣಗಳಿಂದ ಸಂಪನ್ನವಾಗಿ ಕವಿಗೆ ಸಾಹಿತ್ಯದಲ್ಲಿ ಅತ್ಯುತ್ತಮವಾದ ಸ್ಥಾನವನ್ನು ಕೊಡತಕ್ಕುದಾಗಿದೆ ಎಂಬುದನ್ನು ಮತ್ತೆ ಹೇಳಬೇಕಾದದ್ದಿಲ್ಲ.

ಪ್ರಕೃತಿಯ ಸೌಂದರ್ಯದ ವರ್ಣನೆಯಲ್ಲಿ ಈ ಕವಿಯು ಯಾವ ಸೌಲಭ್ಯವನ್ನೂ ಕೌಶಲವನ್ನೂ ತೋರಿಸುವನೋ ಮನುಷ್ಯ ಸ್ವಭಾವ ನಿರೂಪಣದಲ್ಲಿಯೂ ಅದೇ ಸೌಲಭ್ಯವನ್ನೂ ಕೌಶಲವನ್ನೂ ತೋರಿಸುವನು. ಸೀತಾದೇವಿಯು ಒಂದುಸಲ ಕನ್ನೆವಾಡದ ನೆಲೆವನೆಯ ಮೊಗಸಾಲೆಯಲ್ಲಿ ತೂಗುಮಂಚದಲ್ಲಿ ಕುಳಿತು ಕೆಳದಿಯಾದ ಚಂದ್ರಮತಿಯೊಡನೆ ಇರುತ್ತಿರಲು ಎದುರಿಗೆ ಒಂದು ಗುಬ್ಬಚ್ಚಿಯು ತನ್ನ ಎಳೆಯ ಮರಿಗೆ ಗುಟುಕನ್ನು ಕೊಟ್ಟು ಅದನ್ನು ರೆಕ್ಕೆಯಲ್ಲಿ ಸೇರಿಸಿಕೊಂಡು ಮುದ್ದಿಸುವುದನ್ನು ನೋಡಿ ದೇವಿ ಮಕ್ಕಳ ಬಯಕೆಯಿಂದ ಹೀಗೆಂದಳಂತೆ:

"ಮಿತ್ರೆ ನೋಡೆ! ನೋಡೆ! ನೀಡುಂ ನೀಡದ ಪಕ್ಷಿಯುಮೆನ್ನಂ
ಭಂಜಿಯಿಸುತ್ತೇಡಿಸಂತ್ತೆನ್ನಿದಿರೊಳ್ ಪಿಳ್ಳೆಯುಂ ಮುದ್ದುಗೆಯ್ಯುಂ.
ಇಂತಿರ್ಪಿನಮಿನ್ನೊಲ್ದೆನೀಯೆಡೆಮಂ. ಎತ್ತಾನುಂ ಪೆೞ್ತೊಂದೆಡೆಗೆ
ಪೋಪಂ. ಅಲಸುವೆನೀ ನೋಟಕ್ಕೆ. ಓ! ಈ ಪಕ್ಷಿಯನೊಂದನೆ ಪಗೆ
ವನೇತರ್ಕೆಯೊ ನಿರ್ನೆರಂ! ಎನ್ನನ್ನರ್ಗೆ ಲೋಕಮೆ ಪಗೆ! ಪಲವಾತಿ

ನೇನಕ್ಕುಂ. ನಿಕ್ಕುವಂ ಮಕ್ಕಳಂ ಪಡೆದೋವಲ್ಲಾಂ ನೋಂತೆನಿಲ್ಲಕ್ಕುಂ. ಎಳವರಯದೊಳ್ ಸಲ್ಲಾಸಂ ಪೆತ್ತು ಬಾಲಕೇಳಿಯಂ ಕಣ್ದಣಿಯೆ ಕಂಡು ಸಂಸಾರದ ಸಾರಮಿದೆನುತೆ ಸಂತಸಂಬಡುವ ಪೆಣ್ಗಳೆ ಧನ್ಯರಲ್ತೆ! "ಬಂದಳಿವಳ್! ಬಂಜೆ! ಕಂದನಂ ಪಿಡಿಯಲ್ಕೀಯದಿರ್! ಬಡವಕ್ಕುಂ! ಕಿಟ್ಟೆ ವಿಡದಿರ್! ಕಂದಿ ಬಸವೞ್ಗುಂ; ನೋಡವಿಡದಿರ್! ಕಣ್ ಕೊಂಕುಗುಂ; ನುಡಿಯಿಸಲೆಡೆಗುಡದಿರ್! ನುಡಿಯೊಗ್ಗುಗುಂ" ಎಂಬ ನಾಡಪೆಣ್ಗಳ ಬಿಱುನುಡಿಗೆ ತಡೆದುಂ ಬಾೞ್ವ ವಂಧ್ಯೆಯರೆ ಜೀವನ್ಮೃತೆಯರ್ ವಲಂ. ಸಖೀ! ಮಾಂಜಮುಸಿರ್; ಕುಲಮಂ ವರ್ಧಿಪ ಕಂದನಂ ಪಡೆದು ತೊರೆದ ಮೊಲೆಯೂಡಿ ತೊಟ್ಟಿಲೊಳಿಟ್ಟು ಪಾಡಿ ತೂಗಿ ಕೂಸು ನಿದ್ರೆವೋಪುದಂ ತಾನುಮರೆಗಱೀಗೆ ಕೆಲದೊಳ್ ಮೆಂಡಿಸಿ ಬಾಲಲೀಲೆಯಂ ನೆನೆನೆನೆದು ಮತ್ತಂ ಕುವರನೆೞ್ಚತ್ತನಾಗೆ ಪಿಡಿದೆತ್ತಿ ಮುಂಡಾಡಿಯುಂ ಮುದ್ದಿಸಿಯುಂ ತೊದಳ್ನುಡಿಯೊಳ್ ನುಡಿಸಿಯುಂ ಕಿಱುನಗೆಯೊಳ್ ನಗಿಸಿಯುಂ ಪೊಸಬಿನದವಿನಾಡಿಸಿಯುಂ ಮನದ ಬೇಸಱಂ ಕಳೆವೊಂದು ಸೈಪೆನ್ನೊಳೆಂದಿಂಗಾದಪುದೋ!"

ಮುದ್ದಣನಿಗೆ ಈ ಪುಸ್ತಕವನ್ನು ಬರೆಯುವಾಗ್ಗೆ ಪ್ರಾಯಶಃ ಮಕ್ಕಳಿರಲಿಲ್ಲವೆಂದು ನಾನು ಈಗ ಹತ್ತುವರ್ಷಗಳ ಹಿಂದೆ ಒಂದು ಸಂದರ್ಭದಲ್ಲಿ ಊಹಿಸಿ ಹೇಳಿದೆನು. ಈಗ ಗ್ರಂಥಕರ್ತನ ಚರಿತೆಯು ಈಚೆಗೆ ತಿಳಿದುಬಂದಿದೆ. ಅದನ್ನು ನೋಡುವುದರಲ್ಲಿಯೂ ಈ ಊಹೆಯು ಸರಿಯಾಗಿರಬೇಕೆಂದು ತೋರುವುದು. ಮುದ್ದಣನೂ ಮನೋರಮೆಯೂ ಆಡುವ ಮಾತು ಗಂಡಹೆಂಡಿರು ಹೊಸ ಸಂಸಾರದ ರಾಗರಸ ಭರಿತವಾದ ಪ್ರಣಯದಲ್ಲಿ ಆಡುವ ಮಾತುಗಳು. ಕವಿಯು ಅಲ್ಲಲ್ಲಿ ಪತ್ನಿಯನ್ನು ಸಂಬೋಧಿಸಿ ಕರೆಯುವ ಸೊಗಸಿನಿಂದಲೇ ಇದು ಸ್ಪಷ್ಟವಾಗುವುದು. ರಮಣೀ, ಪ್ರಾಣೇಶ್ವರಿ, ಎನ್ನರಸಿ, ಕೇಳೆಲೆ ಬಾಲೆ, ಬಾಲೇಂದುಫಾಲೆ, ಪೆಣ್ಮಣಿ ಕೇಳ, ಪ್ರಾಣನಾಯಿಕೆ, ದೇವೀ, ಎನ್ನ ರನ್ನ ಗೈಪಿಡಿ, ಮೋಹನಾಂಗಿ, ಎನ್ನ ನಿಚ್ಚದ ಪೂಜೆಯ ಕಟ್ಟಚ್ಚಿನ ಪ್ರಾಣಲಿಂಗವೆ, ಒಚ್ಚೇರಗಣ್ಣ ಪೆಣ್ಣೆ, ಎನ್ನ ಕೈಮುರ್ಚಿನ ಗಡೆಯಾಟದ ಮುತ್ತಿನ ಸೆಂಡೆ, ಎನ್ನ ಚೆನ್ನ ಪೊನ್ನರಸಿ, ಎನ್ನ ಸಿಂಗರದ ಸಿರಿಯೆ. ಇವನಿಗೆ ಹೆಂಡತಿಯನ್ನು ಏನೆಂದು ಕರೆಯುವುದೆಂಬ ವಿಷಯದಲ್ಲಿ ಯೋಚನೆಯಿಲ್ಲವೇ ಇಲ್ಲ. ಸಂಸಾರದಲ್ಲಿ ಕೆಲವುಕಾಲ ಕಳೆದಮೇಲಾದರೂ ಪತ್ನಿಯ ವಿಚಾರದಲ್ಲಿ ಈ ಉತ್ಸಾಹವಿರುವುದು

ಅಪೂರ್ವ. ಈತನು ಪತ್ನಿಯನ್ನು ಹತ್ತು ಹೆಸರಿನಿಂದ ಸಂಬೋಧಿಸು ವಂತೆಯೇ ಆಕೆಯು ಯುವತಿಗೆ ಸಹಜವಾದ ಒಂದು ನಾಚಿಕೆ ಯಿಂದಲೂ ಇವನ ಪ್ರೀತಿಗೆ ಕಡಮೆಯಿಲ್ಲದ ತನ್ನ ಒಂದು ಪ್ರೀತಿ ಯನ್ನು ಸೂಚಿಸುವಂತೆಯೂ, ಇವನನ್ನು ಒಂದೊಂದೇ ಮಾತಿ ನಿಂದ ರಮಣ, ಎನ್ನೊಡೆಯ, ನಲ್ಲ, ಅಣ್ಮ, ಎನ್ನರಸ ಎಂದು ಸಂಬೋಧಿಸುವಳು. ಅಲ್ಲದೆ ಮುಂದೆ ತಿಳಿಯುವಂತೆ ಕವಿಗೆ ಊಟದ ವಿಷಯದಲ್ಲಿ ಇನ್ನೂ ಉಜ್ವಲವಾದ ಉತ್ಸಾಹ. ಮಕ್ಕಳಾದವರಿಗೆ ಸಾಮಾನ್ಯವಾಗಿ ಈ ಉತ್ಸಾಹವಿರುವುದಿಲ್ಲ. ಮನೋರಮೆಯೂ ಹೊತ್ತುಹೋಗುವುದಿಲ್ಲವೆಂದು ಬೇಸರಪಡುತ್ತಾ ಕವಿಯು ಬಂದೊಡನೆ ಕತೆ ಹೇಳೆಂದು ಕೇಳುವುದರಿಂದ ಎಲ್ಲ ಕೆಲಸಕ್ಕಿಂತ ದೊಡ್ಡದಾದ ಮಕ್ಕಳನ್ನು ಸಾಕುವುದೆಂಬ ಕೆಲಸವನ್ನು ಇನ್ನೂ ಕೈಗೊಂಡಿರಲಿಲ್ಲ ವೆಂದು ತೋರುವುದು. ಸೀತೆಯು ಪಕ್ಷಿಯನ್ನು ನೋಡಿ ತನ್ನ ಬಂಜೆ ತನವನ್ನು ನಿಂದಿಸಿಕೊಂಡಳೆಂಬ ಭಾಗದಲ್ಲಿ ಕವಿಯು ಎಂದಾದರೂ ತನ್ನ ಪತ್ನಿಯು ಹೀಗೆ ಎಣಿಸುವಳೋ ಎಂದು ತನಗೆ ತೋರಿದ ಭಾವವನ್ನು ವರ್ಣಿಸಿರಬಹುದು. ಇದರಂತೆಯೇ ಮಕ್ಕಳಿಲ್ಲದವರು ಮಕ್ಕಳು ಇರುವವರ ಸುಖವನ್ನು ಹೇಗೆ ನೆನೆಯುವರೆಂಬುದೂ ಈ ಸಂದರ್ಭದಲ್ಲಿ ವರ್ಣಿತವಾಗಿದೆ. ಆ ವರ್ಣನೆಯಲ್ಲಿ ಕೂಡ ಇದೇ ಆತ್ಮೀಯತೆಯು ಕಂಡುಬರುವುದು.

ಕವಿಯು ಕತೆ ಹೇಳುವುದರಲ್ಲಿ ಅತಿಶಯವಾದ ಕೌಶಲವನ್ನು ತೋರಿಸಿರುವನೆಂದೂ ಮನೋರಮೆಯಿಂದ ಪಾಠಕರ ಅಭಿಪ್ರಾಯಕ್ಕೆ ರೂಪುಗೊಟ್ಟಿರುವನೆಂದೂ ಹೇಳಿದೆ. ಇದು ಈ ಗ್ರಂಥದಲ್ಲಿ ಅನೇಕಕಡೆ ಕಂಡುಬರುವುದು. ಅಂಥ ಒಂದು ಸಂದರ್ಭವನ್ನು ಇಲ್ಲಿ ನಿರೂಪಿಸ ಬಹುದು. ಶ್ರೀರಾಮನು ಲಕ್ಷ್ಮಣನಿಗೆ ಸೀತೆಯನ್ನು ಕಾಡಿಗೆ ಒಯ್ದು ಅಲ್ಲಿ ಬಿಟ್ಟು ಬರುವಂತೆ ಆಜ್ಞೆಯನ್ನಿತ್ತು ಕಳುಹಿಸಲಾಗಿ ಆತನು ಅತ್ತಿಗೆ ಯನ್ನು ಕರೆದುಕೊಂಡು ಉತ್ತರಾಭಿಮುಖವಾಗಿ ಹೊರಟ ಸಂದರ್ಭ ಅದು. ಇಲ್ಲಿ ಮೊದಲು ಸೀತೆಯನ್ನು ಕಳುಹಿಸುವುದೇ ಬಿಡುವುದೇ ಎಂದು ನಾಲ್ಕೈದು ಪುಟದಷ್ಟು ಚರ್ಚೆ ಇದೆ. ಲಕ್ಷ್ಮಣನ ಖೇದವನ್ನು

ಕುರಿತು ವಿಸ್ತಾರವಾದ ವರ್ಣನೆಯಿದೆ. ಸೀತಾದೇವಿಯ ಪ್ರಯಾಣ ಸನ್ನಾಹದ ವಿವರವಾದ ವರ್ಣನೆ, ಗಂಗಾನದಿಯ ದೀರ್ಘವಾದ ಚಿತ್ರ, ಗಾಳಿ, ನದಿ, ಕಾಡು ಇವುಗಳ ಸರ್ವಲಕ್ಷಣ ಸಮನ್ವಿತವಾದ ಸುಂದರವಾದ ವಿವರಣೆಗಳು ಇವೆ. ಇದಾದಮೇಲೆ ಕವಿಯು ಲಕ್ಷ್ಮಣನು "ನಟ್ಟಡವಿಯಂ ಪೊಕ್ಕು ಕಟ್ಟಕಡೆಯೊಳ್ ಅಣ್ಣನ ಕಟ್ಟಾಣತಿಯನೊರೆದು ಭೂಮಿಜೆಯನುೞಿಸಿ ಪೋದಂ" ಎಂದು ಎರಡು ಮಾತಿನಲ್ಲಿ ಹೇಳಿ "ಶ್ರೀರಾಮಾಶ್ವಮೇಧದೊಳ್ ಸೀತಾಪರಿತ್ಯಾಗವೆಂಬ ಪಂಚಮಾಶ್ವಾಸಂ ಸಂಪೂರ್ಣಂ" ಎಂದು ಆಶ್ವಾಸವನ್ನು ಮುಗಿಸುತ್ತಾನೆ. ಪಾಠಕರಿಗೆ ಕಾಡಿನ ಸೊಗಸೂ ಗಂಗಾನದಿಯ ನೀರಿನಲ್ಲಿಯ ಸುಳಿಯ ಚೆಂದವೂ ಬೇಕಾಗಿರುವುದಕ್ಕಿಂತ ಸೀತೆಯ ಪಾಡು ಏನಾಯಿತೆಂದು ತಿಳಿಯುವುದು ಹೆಚ್ಚಾಗಿ ಬೇಕಾಗಿರುತ್ತದೆ. ಕವಿಯು ಇದನ್ನು ಬಲ್ಲನು. ಆದುದರಿಂದ ಕಾಡಿಗೂ ಸುಳಿಗೂ ಹೆಚ್ಚು ಪ್ರಾಶಸ್ತ್ಯವನ್ನು ಕೊಟ್ಟು ಸೀತೆಯನ್ನು ಕಾಡಿನಲ್ಲಿ ಬಿಟ್ಟ ವಿಷಯವನ್ನು ಎರಡು ಮಾತಿನಲ್ಲಿ ಮುಗಿಸುತ್ತಾನೆ. ಇದರಿಂದ ಈ ಸಂದರ್ಭದ ದುಃಖವು ನೂರುಮಡಿ ಗುಣಿತವಾಗುವುದು. ಇದಲ್ಲದೆ ವರ್ಣನೆಯ ವಿಸ್ತಾರದಿಂದ ಮತ್ತೊಂದು ಪರಿಣಾಮವು ಪಾಠಕರ ಮನಸ್ಸಿನಲ್ಲಿ ಉಂಟಾಗುತ್ತದೆ. ಸೀತೆಯು ತಪೋವನವನ್ನು ನೋಡಬೇಕೆಂಬ ಬಯಕೆಯಿಂದ ಹೊರಟಿದ್ದಳು. ಇಲ್ಲಿ ಸುಂದರವಾದ ವನವಿದೆ, ಪಾವನೆಯಾದ ಗಂಗೆ ಇದ್ದಾಳೆ. ಆದರೆ ಆ ಬಯಕೆಯ ಸುಖವು ಪ್ರಾಪ್ತವಾಗಲಿಲ್ಲ. ಇದರಿಂದ ಈ ಎಲ್ಲ ಸೌಂದರ್ಯದ ವಿಷಯದಲ್ಲಿ ಸಾಮಾನ್ಯವಾಗಿ ಇರಬಹುದಾದ ಉತ್ಸಾಹಕ್ಕೆ ಬದಲಾಗಿ ಪಾಠಕರ ಮನಸ್ಸಿನಲ್ಲಿ ಒಂದು ವಿರಕ್ತಿಯುಂಟಾಗುವುದು. ಲಕ್ಷ್ಮಣನು ಸೀತೆಯನ್ನು ಬಿಟ್ಟು ಹೋದನು ಎಂಬ ಮಾತನ್ನು ಕೇಳಿ ಮನೋರಮೆಯು ಕಂಬನಿಗರೆದು

> "ಆಃ! ಎನ್ನೊಡೆಯ! ನೀನುಮೆಂತು ಕಲ್ಮನನಾದಯ್. ಒರ್ತಡವೆಯೆ ದೇವಿಯಂ ಕಾಱಡವಿಯೊಳುೞಿದು ಲಕ್ಷ್ಮಣಂ ಪೋದನೆಂಬೊಡೆ ಮೈದುನಂಗವಾದೊಡಮೆಂತು ಮನಮಾದುದೋ! ಮೇಣೆಂತು ದೇವಿಯರ್ಗೆ ಕಾವಲಿರದೆ ಪೋದನೋ! ತೊಱೆದು ಪೋಪನ್ನಂ ಸೀತೆಯೇನೆಂದು ಮಱುಗಿದಳೋ! ಅಕ್ಕಟಾ! ಪೆಣ್ಗಳೊಂದು ಬಾೞ್ತೆ ಬಾೞ್ತೆಯೆ!"

ಎನ್ನುವಳು. ಸಮುಗೂ ಕಣ್ಣಿನಲ್ಲಿ ಚಿಮ್ಮಿರುವ ಅಶ್ರುಬಿಂದುವನ್ನು ಒರಸಿಕೊಳ್ಳುವುದಕ್ಕೆ ಇದರಿಂದ ಸ್ವಲ್ಪ ಅವಕಾಶ ಸಿಕ್ಕುತ್ತದೆ. ಈ ಅವ ಕಾಶದಲ್ಲಿ ಒಂದು ಕ್ಷಣ ಕವಿಯು ವರ್ಣಿಸುವ ಮೊದಲೇ ಸೀತೆಯ ಅವಸ್ಥೆಯನ್ನು ಭಾವನೆಯಲ್ಲಿ ಸ್ವಲ್ಪ ಕಂಡು ಮತ್ತಷ್ಟು ಕುಗ್ಗುತ್ತೇವೆ. ಮನೋರಮೆಯ ಪ್ರಾರ್ಥನೆಯಂತೆ ಅವನು ಆ ಅವಸ್ಥೆಯನ್ನು ವರ್ಣಿಸು ವುದಕ್ಕೆ ಆಂಭಿಸುವ ವೇಳೆಗೆ ಆ ಖೇದದ ಬಹುಭಾಗವನ್ನು ಅನುಭವಿಸಿ ಮುಗಿಸಿ, ನೊಂದರೂ ಸ್ತಿಮಿತವಾಗಿರುವ ಮನಸ್ಸಿನಿಂದ ಕವಿಯ ವರ್ಣನೆಯನ್ನು ಕೇಳಲು ಸಿದ್ಧರಾಗುತ್ತೇವೆ. ಕತೆ ಕೇಳುವವರ ಮನಸ್ಸನ್ನು ವೀಣೆಯಂತೆ ಕೈಗೆ ತೆಗೆದುಕೊಂಡು ಅದರಲ್ಲಿ ಇಷ್ಟಬಂದ ಭಾವಗಳನ್ನು ಹೀಗೆ ಧಾರಾಳವಾಗಿ ಉಂಟುಮಾಡುವುದು ಕವಿತಾ ಶಕ್ತಿಯ ಪೂರ್ಣಾವೇಶಕ್ಕೆ ಮಾತ್ರ ಸಾಧ್ಯ. ಈ ಕವಿಯು ಪಾಠಕರ ಮನಸ್ಸನ್ನು ತನ್ನ ಭಾವದಿಂದ ಹೀಗೆ ಹಿಡಿದುಕೊಳ್ಳಬಲ್ಲನು; ಅದರ ಮೇಲೆ ತನ್ನ ಇಷ್ಟದಂತೆ ಪರಿಣಾಮವನ್ನುಂಟುಮಾಡಬಲ್ಲನು. ಇದೆಲ್ಲ ಮುದ್ದಣನ ಕತೆ ಹೇಳುವ ನೈಪುಣ್ಯವನ್ನು ತೋರಿಸುವುದು.

ಇದೇ ಸಂದರ್ಭದಲ್ಲಿ ಸಮಯಕ್ಕೆ ತಕ್ಕಂತೆ ಮಾತನಾಡಿಸುವ ಶಕ್ತಿಯೂ ಕಾವ್ಯದಲ್ಲಿ ತೋರಿಬರುವುದು. ತಾನು ಸೀತೆಯನ್ನು ಬಿಟ್ಟು ಹೋಗುವೆನೆಂದು ಲಕ್ಷ್ಮಣನು ಹೇಳುವ ಮೊದಲು ದೇವಿಯು ಸಂದರ್ಭವನ್ನರಿಯದೆ ಮೃದುವಸನ್ನು ಕುರಿತು "ಕಂದ, ಈ ಅಡವಿಯಲ್ಲಿ ಆಶ್ರಮವೆಲ್ಲಿಯದು! ನೀನು ದಾರಿ ತಪ್ಪಿದೆ" ಎಂದು ಹೇಳುವಳು. ತಾನು ಮಾಡ ಬಂದಿರುವ ಕೆಲಸದ ಧ್ಯಾನದಿಂದ ಖಿನ್ನನಾಗಿರುವ ಲಕ್ಷ್ಮಣನು ಅತ್ತಿಗೆಯ ಈ ಪ್ರೇಮಪೂರಿತವಾದ ಸಂಬೋಧನೆಯನ್ನು ತಡೆಯಲಾರದೆ ಒಡನೆ ಅವಳ ಕಾಲಿಗೆ ಬಿದ್ದು "ನನ್ನನ್ನು 'ಕಂದ' ಎಂದು ಕರೆಯಬೇಡಿ, 'ಹಗೆ' ಎಂದು ಎಣಿಸಿ" ಎಂದು ತಾನು ಮಾಡಬಂದಿರುವ ಕಾರ್ಯವನ್ನು ತಿಳಿಸುವನು. ಲಕ್ಷ್ಮಣನ ಮಾತನ್ನು ಕೇಳಿ ದೇವಿಯು ಮೈಮರೆತು ಮತ್ತೆ ಅರಿದು ಬಹು ವಿಧವಾಗಿ ಹಂಬಲಿಸಿ ಕೊನೆಗೆ ತನ್ನ ತಾಯ ತಾಳ್ಮೆಗೆ ಎಣೆಯಾದ ತಾಳ್ಮೆಯಿಂದ ಆ ತಾಯ ಪ್ರೇಮಕ್ಕೆ ಸರಿಯಾದ ಪ್ರೇಮದಿಂದ

ಕಂದ, ನಿನ್ನಲ್ಲಿ ತಪ್ಪಿಲ್ಲ. ನಿಮ್ಮ ಅಣ್ಣನು ಕೇಳಿದರೆ "ನಿನ್ನಾಣತಿಗ ಬಲೆ ಮಱುಗಿದಳಿಲ್ಲ. ಮಾರ್ನುಡಿದಳಿಲ್ಲ. ಮುನಿಸಾಂತಳಿಲ್ಲ. ಬೆರ್ಚಿದ ಳಿಲ್ಲ. ಕೂರ್ಕುದಿಗೊಂಡಳಿಲ್ಲ. ದೂಱಿದಳಿಲ್ಲ. ನೀನೇ ಗತಿಯೆಂದು ನಿನ್ನಡಿಯಂ ನೆನೆಯುತ್ತೆ ಕಡೆಪೋರ್ತಿಂ ಪಾರುತಿರ್ಪಳೆಂದು ಬಿನ್ನವಿಸಯ್"

ಎಂದು ಹೇಳುವಳು.

ಈ ಮಾತು ದೇವಿಯಲ್ಲಿ ಎಷ್ಟು ಉಚಿತವಾದುದು! ಹೀಗೆಯೇ ಊರ್ಮಿಳೆ ಮೊದಲಾದವರಿಗೆ ಏನು ಹೇಳುವುದೆಂದೂ ತಾನು ಇನ್ನು ಉಪಯೋಗಿಸಲಾಗದ ವಸ್ತ್ರಾಭರಣಗಳನ್ನು ತನ್ನ ದಾಸಿಯರಿಗೆ ಓರಗಿತ್ತಿಯರಿಗೆ ಯಾವಯಾವುದನ್ನು ಕೊಡಬೇಕೆಂದೂ ಲೋಕ ಮಾತೆಯು ಹೇಳಿರುವುದನ್ನು ಕವಿಯು ವರ್ಣಿಸಿರುವುದೂ ಸಂದರ್ಭೋ ಚಿತವಾಗಿ ಹೃದಯದ್ರಾವಕವಾಗಿ ಇವೆ. ಇದನ್ನೆಲ್ಲಾ ಕಾವ್ಯವನ್ನು ಓದಿಯೇ ತಿಳಿಯಬೇಕು.

ಸೀತೆಯನ್ನು ತ್ಯಜಿಸಿರುವುದರಿಂದ ರಾಮನ ವಿಷಯದಲ್ಲಿ ನಮ ಗುಂಟಾಗಿರುವ ಅಸಂತುಷ್ಟಿಯನ್ನು ಕವಿಯು ಇಷ್ಟರಲ್ಲೇ ಮನೋ ರಮೆಯ ಬಾಯಲ್ಲಿ ವ್ಯಕ್ತಗೊಳಿಸಿ ಮುಂದಣ ಕತೆಗೆ ಪಾಠಕರ ಮನಸ್ಸನ್ನು ಹೀಗೆ ಸರಿಪಡಿಸಿಕೊಳ್ಳುವನು.

ಮುದ್ದ—ಎನ್ನ ಕೊಂಡಾಟದ ಬ್ರಾಹ್ಮಣಮೆ! ಇಂತು ಭೂಜಾತೆ ಪ್ರಾಚೇತಸನೊಲ್ಮೆಗಾಪಿಂ ಪುಣ್ಯಾಶ್ರಮದೊಳಿರ್ಪನಮಿತ್ತಲ್ ಸಾಕೇತನಗರ ದೊಳ್ ಸೀತಾರಾಮಂ ತನ್ನ ಬಿರ್ದಿನ....

ಮನೋ—ನಲ್ಲ! ಏ ಮಾತೊ? ಸೀತೆಯನಂತುಱಿದುಮೇತಱ ಸೀತಾರಾಮಂ ಪೋ! ಮಾಣ್! ಅವಂಗಿನ್ನೆತ್ತಣ ಸೀತೆ? ಅಪ್ಪೊಡಿನ್ನಾ ಕಲ್ಲೆರ್ದೆಯಂ ರಾಮನೋ ಭೀಮನೋ? ಏನ್.

ಮುದ್ದ—ಎನ್ನ ಕೈಗಳಸಮೆ! ಇಂತುಮೆಂಬರೆ! ಶ್ರೀರಾಮಂ ಕಲ್ಲೆರ್ದೆಯನೆ! ಆಃ! ಬಱಿಕ್ಕಮಾತನ ಪ್ರಳಾಪಮಂ ನೀಂ ಕೇಳ್ದುದಿಲ್ಲಂ.

ಮನೋ—ಏಂ ತಾನೆ ತಲೆವೊಯ್ದುಂ ಮಱುಗಿದನೆ?

ಮುದ್ದ—ರಾಮಂ ತಲೆವೊಯ್ದನೇಂ? ತಾಂ ಯಶೋಧನ ನಪ್ಪಿನಂ ಲೋಕಾಪವಾದ ಭೀತಿಗಡವಿಗಟ್ಟಿದರಸಿಯೊಳೇಂ ಪಗೆಯೆ?

ಮನೋ—ಪಗೆಯೇಂ ನಗೆಯೇಂ? ಬಡವೆಯೊರ್ವಳ್ ಕಾಡಿಂ ಗಾದಳ್ಳೆಸೆ.

ಮುದ್ದ—ಇಂತಿದನೆ ನೆನೆನೆನೆದೞ್ರಿಂಬಂ ಪಲುಂಬಿದಂ.
ಮನೋ—ಏಂ ತನಗೆ ಪೆಱರ್ ಪೆಂಡಿರಿಲ್ಲೆಂದೆಯೆ?
ಮುದ್ದ—ಪರಿಹಾಸಂ ಸಾಲ್ಗುಂ ಕೇಳ್; ಏಗಳ್ ಲಕ್ಷ್ಮಣಂ ಸೀತೆಯಂ ಕೊಂಡೊಯ್ದನೆಂಬ ವಾರ್ತೆ ಕೇಳಿಸಿದುದಾಗಳೆ ಪಶ್ಚಾತ್ತಾಪದಿಂ ರಾಘವನಂ ಮನವೊಳಗೊಳಗೆ ಬೆಂದು ಬೇಗುದಿಯೊಳಿರ್ದತ್ತು.

ಸೀತೆಯು ವಾಲ್ಮೀಕಿಯ ಆಶ್ರಮವನ್ನು ಸೇರಿದಳೆಂದು ಕವಿಯು ಈ ಮೊದಲೇ ತಿಳಿಸಿರುತ್ತಾನೆ. ಹೀಗೆ ಹೆಜ್ಜೆಹೆಜ್ಜೆಗೂ ಕತೆಹೇಳುವಲ್ಲಿ ಕವಿಯು ಪಾಠಕರ ಮನಸ್ಸಿನ ಯಾವ ಅವಸ್ಥೆಯನ್ನು ಹೇಗೆ ಉಂಟು ಮಾಡಿಕೊಳ್ಳುವುದೆಂದು ಚೆನ್ನಾಗಿ ತಿಳಿದು ಆಯಾ ರೀತಿಯಲ್ಲಿ ಅವರ ಮನಸ್ಸನ್ನು ತಿದ್ದಿಕೊಳ್ಳುವನು.

ಈ ಕಾವ್ಯದ ಪ್ರಕೃತಿ ಸೌಂದರ್ಯದ ವರ್ಣನೆಯು ಸೊಗಸನ್ನು ತೋರುವಂತೆ ಈ ಮೊದಲೇ ಉದಾಹರಣೆಯನ್ನು ಕೊಟ್ಟಿದೆ. ಬಹು ಸುಂದರವಾದ ಮತ್ತೊಂದು ವರ್ಣನೆಯು ವಿಮರ್ಶೆಯಿಂದ ಈ ಅಭಿಪ್ರಾಯವನ್ನು ಪುಷ್ಟೀಕರಿಸಬಹುದು. ಶತ್ರುಘ್ನನು ಸೇನಾಸಮೇತನಾಗಿ ಯಜ್ಞಾಶ್ವದ ಹಿಂದೆ ಪ್ರಯಾಣಮಾಡುತ್ತಿರಲು ಮುಂದೆ ಒಂದು ನೀಲಪರ್ವತವು ಕಂಡಿತೆಂದು ಕವಿ ವರ್ಣಿಸುತ್ತಾನೆ.

"ಅಡಿಗಡಿಗೆ ಬದ್ದ ಬದಸಿಂ ಪಗೆದು ಪತ್ತುವಿಡಿಸಿ ದೆಸೆಗಿಡಿಸಿದೊಂದು ಬಗೆಗೇಡಿಂ ಪೆಸಿದೆಸೆಯ ಕತ್ತಲೆಯ ಬಿಂದವೊಂದುಗೂಡಿ ಗುಂಡುಗೊಂಡು ತಮ್ಮ ಪಗೆಯ ಬೆಂಗದಿರನಬೊಂದಿಯಂ ಬಂದಿವಿಡಿಪ್ಪೊಂದು ಪ್ರಿವಣೆಯಿಂ ಬಿಂದಳಮನೇಱ ಪೋಪುವೆಸೆ—ನೆರೆದ ಸೀರ್ಪ್ರೊಟ್ಟಣದೊಳ್ ಬೆಚ್ಚಂತಿರೆ ಮೆಯ್ವೆರ್ಚಿ ಸಿಗುರ್ದದೊಂದು ನೀಲಪರ್ವತಂ ಮಾಕಾಳಿಯ ಎಡ ಮೊಲೆಯಂತೆ ವಿರಾಜಿಸಿದತ್ತು. ಅಂತದು ದಟ್ಟಯಿಸಿ ಮುಗಿಲ್ಮುಟ್ಟಿ ಬೆಳೆದ ಕರ್ಪೂರಂಗಳಿಂ ತುಂಬಿನ ಬನಗತ್ತಲೆಯನೊಳಕೊಂಡೇಪ್ರೊತ್ತುಂ ಚರಿಪ ಖಗಮೃಗಂಗಳ್ಗೆ ತನ್ನೊಳನೊಂದು ಭ್ರಾಂತಿಯಂ ಪುಟ್ಟಿಸಿ ಒತ್ತರದಿನಿಂಬುಗೊಂಡ ಕರ್ಪೂರಣಿಯ ಪಾಸಱೆಯಿಂ, ಅಂದು ಚಂಡಿಕೆಯ ಕೂರ್ವಾಳಿಂ ಪೋೞ್ಗಿಡಿದೋದ ಮಹಿಷಾಸುರನ ಬಿರಿಪ್ರೊಡೆಯಿಂ ಸುರಿದ ದಂಡೆಗರುಳ್ಗೆ ಪ್ರಾಸಟಿಯಪ್ಪ ಅರೆಜಪಿದ ಜಾದಿನ ಕೋಡುವೆಟ್ಟು ಸ್ತೊತ್ತುಗೊಂಡು ಸಿಂದೂರವಿಲಿಪ್ತ ಮದಸಿಂಧುರಗಂಡಮಂಡಲದೊಂದು ಪೊಂಗಿನಿಂ ತೋರ್ಪ ತಪ್ಪಿಲಂ, ಪಗಲ್ಗೆ ಪಡಿನೇಸಱನೆ ಇರುಳ್ಗೆ ಪಡಿದಿಂಗಳೆನೆ ತೊಳಗಿ ಬೆಳಗಿ ಜಿಟ್ಟುವಗೆಯುಂ ಪಗೆಯಿನಿಟ್ಟ ಕುಳಿಸದ



ಕಡಿಕಂಡದಂತೊಪ್ಪುವಚ್ಚವಳಿಕಿನ ಗಂಡಶೈಲದಿಂ, ನಿಚ್ಚವಯಣಂಬರ್ಪ ಜಾತ್ರೆಯ ಜನರ ಬಿರ್ದಿನ ಪಗಲೂಟದ ಬಾಣಸಿನಾವಿಗೆಯ ತನಿಗೆಂಡದೋವರಿಯೆಂಬಂತು ತೞ್ತಿತೞ್ತಿನೆ ಪೊಳೆವ ರಂಗುಮಾಣಿಕದೞ್ತಿಯಿಂ, ಪುರುಷೋತ್ತಮನ ನಿಡುವಣೆಯ ತ್ರಿಪುಂಡ್ರದೊಂದು ಮಾೞ್ಕೆಯಿಂ ಮೂರುಂಕೆಲನೊಳಿೞಿತರ್ಪ ಬೆಳ್ಳಂ ಬರಿವರ್ಬಿಯಿಂ, ಉಣ್ಣದರುಣ್ಬ ಮದುರ್ಮದರ್ಮದರ್ಪೊಂಬಾೞೆದೋಂಟದೊತ್ತಿನ ಪೇರುಚ್ಚದಿಂ, ಸಿದ್ಧರಸದ ಮಡುವಿಂ, ಪರುಸಗಲ್ಗಳಿಂ ಮನೋಜ್ಞಂ.''

ಈ ವರ್ಣನೆಯಲ್ಲಿ ಚಿತ್ರಗಾರನು ಚಿತ್ರಬರೆಯುವುದರಲ್ಲಿ ಯಾವ ಉಪಾಯಗಳನ್ನು ಉಪಯೋಗಿಸುವನೋ ಆ ಉಪಾಯಗಳನ್ನೆಲ್ಲ ಕವಿಯು ಉಪಯೋಗಿಸಿರುವನು. ಈ ಪರ್ವತದ ವರ್ಣನೆಯುದ್ದಕ್ಕೂ ನೀಲಿಮೆಯ ಸಂಕೇತವು ಮತ್ತೆ ಮತ್ತೆ ಮೈದೋರುತ್ತದೆ. ಕತ್ತಲೆಯ ವೃಂದ; ನೆರೆದ ನೀರ್ವೊಟ್ಟಣ; ಮಾಕಾಳಿಯ ಎಡವೊಲೆ; ಕರ್ಮಣಿಯ ಪಾಸರೆ; ಚಂಡಿಕೆ; ಮಹಿಷಾಸುರ; ಸಿಂಧುರಗಂಡಮಂಡಲ; ಬಾಣಸಿನ ಆವಿಗೆ; ಪುರುಷೋತ್ತಮನ ನಿಡುವಣೆ; ಪೊಂಬಾಳೆಯ ತೋಟ. ಈ ನೀಲಿಮೆಯು ಚಿತ್ರದ ಒಟ್ಟಿನ ಬಣ್ಣ; ಈ ಒಟ್ಟಿನ ಬಣ್ಣದ ಮೇಲೆ ಒಂದೆರಡು ಬೇರೆಯ ಬಣ್ಣಗಳು. ಮಹಿಷಾಸುರನ ದಂಡೆಗರುಳು, ಅಚ್ಚವಳಕಿನ ಗಂಡಶೈಲ; ತನಿಗೆಂಡದಂತಿರುವ ರಂಗುಮಾಣಿಕ; ಮೂರು ಕಡೆಯಿಂದ ಪುರುಷೋತ್ತಮನ ಹಣೆಯ ತ್ರಿಪುಂಡ್ರದಂತೆ ಹರಿದುಬರುವ ಬೇರೆಬೇರೆ ಬಣ್ಣದ ನೀರಿನ ಧಾರೆ; ಸ್ಪರ್ಶಶಿಲೆ. ಆ ಒಟ್ಟು ಬಣ್ಣದ ಮೇಲೆ ಈ ಬಣ್ಣಗಳು ಅಂದವಾಗಿ ಲೇಪಿಸಲ್ಪಟ್ಟು ಚಿತ್ರವು ಸುಂದರವಾಗಿದೆ. ಸಾಮಾನ್ಯವಾದ ಪರ್ವತವೊಂದನ್ನು ಅದರ ಸೌಂದರ್ಯವನ್ನು ಗ್ರಹಿಸುವ ಬುದ್ಧಿಯಿಂದ ವರ್ಣಿಸುವ ಸಂದರ್ಭದಲ್ಲಿಯೂ ಈ ಲಕ್ಷಣಗಳು ಕಂಡು ಬರಬಹುದು; ಆದರೆ ಇಲ್ಲಿ ಪರ್ವತವು ಪಾವನವೂ ಪುಣ್ಯಾಶ್ರಯವೂ ಎಂಬ ಒಂದು ಧ್ವನಿಯೂ ಇದೆ. ಮಾಕಾಳಿ; ಮಹಿಷಾಸುರನನ್ನು ಕಡಿಯಹೋದ ಚಂಡಿಕೆ; ದಿನವೂ ಬರುತ್ತಿರುವ ಯಾತ್ರಿಕರು; ಪುರುಷೋತ್ತಮನ ನೀಳವಾದ ಹಣೆ. ಒಟ್ಟಿನ ಚಿತ್ರವು ಸುಂದರವಾಗುವುದಲ್ಲದೆ ಅದರ ಒಂದೊಂದು ಭಾಗವೂ ಸಂಪೂರ್ಣವಾಗುವಂತೆ ಕರ್ಮಣಿಯ ಪಾಸರೆಯನ್ನೂ, ಪರ್ವತದ ತಪ್ಪಲನ್ನೂ, ಗಂಡಶೈಲವನ್ನೂ, ರಂಗು

ಮಾಣಿಕದ ಅಗರಿಕ್ತಿಯನ್ನೂ, ನೀರಿನ ಧಾರೆಯನ್ನೂ ಕವಿಯು ವಿವರ ವಾಗಿ ವರ್ಣಿಸಿರುವನು. ಎಲ್ಲಕ್ಕೂ ತಕ್ಕ ಮಾತು; ಮಾತಿನ ಸರಿಗೆ ಯಲ್ಲಿ ಸಣ್ಣಮಾತು ದೊಡ್ಡ ಮಾತು ಸೇರಿದೆ. ಮಾತುಗಳ ಯುಕ್ತಿಯುಕ್ತ ವಾದ ವ್ಯೂಹರಚನೆಯಿಂದ ವಾಕ್ಯದ ಶಬ್ದವು ಮೃದುವಾಗಿ ಕೊನೆಯಾ ಗಿದೆ. ಈ ವರ್ಣನೆಯ ಚಿತ್ರಕಾರ್ಯವು ಅಜಾಂತದ ಚಿತ್ರಗಳ ಕೌಶಲವನ್ನೂ ಇದರ ಶಬ್ದದ ಸೌಂದರ್ಯವು ಶಾಸ್ತ್ರಾನುಗುಣವಾಗಿ ಮೃದಂಗದಲ್ಲಿ ನುಡಿಸಬಹುದಾದ ಒಂದು ಆವರ್ತದ ನಾದತರಂಗದ ಸೌಂದರ್ಯವನ್ನೂ ಹೋಲುವುದು. ಈ ವರ್ಣನೆಯು ಭಾವನೆ ಯಲ್ಲಿಯೂ, ಊಹೆಯಲ್ಲಿಯೂ, ಶೈಲಿಯಲ್ಲಿಯೂ ಸಾಹಿತ್ಯ ಸಾಮ್ರಾ ಜ್ಯದ ಎಲ್ಲೆಯನ್ನು ಮುಟ್ಟಿರುವುದು.

ಈ ಕವಿಯು ಉಳಿದ ರಸಗಳನ್ನು ಸ್ವಾಧೀನಮಾಡಿಕೊಂಡಿ ದ್ದಂತೆಯೇ ಹಾಸ್ಯವನ್ನೂ ಪಡೆದಿದ್ದನೆಂದು ಈ ಕಾವ್ಯದಲ್ಲಿ ಅಲ್ಲಲ್ಲಿ ತೋರುತ್ತದೆ. ಸತಿಪತಿಯರ ಆರಂಭ ಸಂಭಾಷಣದಲ್ಲಿ ಇದು ಕಾಣು ವುದು. ಇದರಂತೆ ಇನ್ನೆರಡು ಸಂವಾದಗಳಿಂದ ಈ ರಸವು ಧಾರಾಳವಾಗಿ ಉಕ್ಕಿಬರುವುದು. ಈ ಸಂವಾದಗಳಲ್ಲಿ ಈ ಕಾವ್ಯಕ್ಕೆ ಒಂದು ಅಪೂರ್ವ ವಾದ ಸೊಗಸು ಬಂದಿರುವುದರಿಂದ ಇವುಗಳನ್ನು ಇಲ್ಲಿ ಉದ್ಧರಿಸಿದೆ. ಕಥೆ ಹೇಳುತ್ತಾ ಮುದ್ದಣನು ಮನೋರಮೆಯನ್ನು ಒಂದುಸಲ 'ದೇವೀ' ಎಂದು ಸಂಬೋಧಿಸುವನು. ಸ್ವಲ್ಪಹೊತ್ತು ಕತೆಯನ್ನು ಕೇಳಿದ್ದು ಕವಿಯೊಡನೆ ಎರಡು ಮಾತನಾಡೋಣವೆಂದು ಆಕೆಯು ಯಾವ ದೇವಿ, ಶ್ರೀದೇವಿಯೇ, ಭೂದೇವಿಯೇ ಎಂದು ಸಂಭಾಷಣೆ ಯನ್ನು ಮೊದಲು ಮಾಡುವಳು. ಆಮೇಲೆ ಮಾತು ಹೀಗೆ ನಡೆಯುವುದು:—

ಮುದ್ದ—ರತಿದೇವಿ.

ಮನೋ—ಅಂತಪ್ಪೊಡೆ ನೀಂ ಕಾಮದೇವಂ.

ಮುದ್ದ—ಅಕ್ಕೆ ದೇವಿಯೊಂದು ಹಸಾದಂ.

ಮನೋ—ಎಲೆ ಮದನ ಮೋಹನರಾಜ! ಅಂತಿರ್ಪೊಡೆ ನೀಂ ಪೇಳ್ದ್ವಿ ರತಿಯನೆ ಬಣ್ಣಿಸಿ ಪೊಗಳ್ದಿರ್ ನೋಳ್ಪಿರ್ಪೆಂ.

ಮುದ್ದ—ಓ! ಏತಱ ಮಾತೊ! ಎನ್ನಳವೆ?

ಮನೋ—ಆಃ! ರತಿಯಂ ಬಣ್ಣಿಸಲ್ಕೆ ಸಲ್ಲದ ನೀನೇತರ ಕಾಮದೇವಂ?

ಮುದ್ದ—ಅಂತಪ್ಪೊಡೆ ಸಲ್ವೆಂ ಸಲ್ವೆಂ; ಕಾಮದೇವನೆಂಬೊಂದು ಬಿರುದಂ ಪಡೆದುಮಾಱಿನೆ? ತೆಗಱ್ವರಿರ್ಕೆ. ಇಡೆ ಇದೆ ತೊಡಂಗಿದೆಂ. ಅಸಿದೊಡಲ ಪೂಗಣ್ಣ ಪೆಣ್; ಸಸಿಮೊಗದ ಕಿಸುವಾಯ ಪುಸಿನಡುವಿನರಸಿ; ಮಿಡಿಮೊಲೆಯ ಪಿಡಿನಡೆಯ ಬಿಡುಜಡೆಯ ನೀಱೆ; ಜೆಟ್ಟು....

ಮನೋ—(ಅರೆನೋಟದಿಂ) ಆಃ! ಕಬ್ಬಿಗರ್ಗೆ ನೀಂ ಕಲ್ತಾಯ್ತು ನಕ್ಕುಂ. ಎಂದು ಕಾಣದರೊಂದು ಪಾಂಗಿನಿಂ ಪೇೞ್ದಿ ಪೊಚ್ಚರದ ನಿನ್ನೀ ಬಣ್ಣನೆಯ ನುಡಿಗೇನೆಂಬೆನೊ! ಒಡಲಸಿದೇಂ? ಮೊಗದೊಳೇತಱ ಸಸಿ? ಕಣ್ಣೊಳೇತಱ ಪೂ? ನಡುವಿನೊಳೇಂ ಪುಸಿ? ಎಂದು ಬಾಯಂ ಕಿಸಿದಳ್. ಜಡೆಯಂ ಬಿದಿರ್ಚಲ್ಕೇಂ ದೆವ್ವಮಾಳ್ದುದೆ? ಪೋ, ನೀಂ ಕಾಮನಲ್ತು ಬೀಮಂ.

ಮುದ್ದ—(ಕಿಱುನಗೆಯಿಂ) ಎನ್ನ ಕುಲದೇವಿ! ಇನಿತೊಂದು ಮುನಿಸೇಂ. ಎನ್ನನಗೆಯಿನಿಂತಾಯ್ತಕ್ಕುಂ; ಸೈರಿಸು! ಸೈರಿಸು! ನುಡಿ ನಿಱ್ರೀಗೆಯುಂ ಬೆದಂಕಿ ಪಾರದಂತುಂ ಇರ್ದಂತೆ ಬಣ್ಣಿಪೊಂದು ಜಾಣ್ಮೆ ದೊರೆಕೊಳ್ವಂತುಂ ಬಾಸೆವೆಣ್ಣೊಂದೊಲ್ದೆ ದಾಳ್ದಿ ವಾಕ್ಸಿದ್ಧಿಯಂ ಪಡೆದು ನಿನ್ನಂ ಎನ್ನ ಜನ್ನದಾರದಾಣೆ! ರತಿಯಿಂ ನೂರ್ಮಡಿ ಮಿಗಿಲೆನಿಸಿ ಬಣ್ಣಿಪೆಂ—ಸುವ್ವಿ! ಸುವ್ವಿ! ನಾಲ್ಮೊಗನಗಿಟ್ಟಿಕೆಯ್ಗೊಳ್ಗೊಗೆದ ಒಳ್ನಗೆಯ ಮುದ್ದುಗುವರಿ! ಸುವ್ವಿ! ಸುವ್ವಿ! ಬೀಣೆ ಹೊತ್ತಗೆಗಳಂ ಪೊತ್ತಕೈಯ ಚೆಲ್ವೆ! ಸುವ್ವಿ! ಸುವ್ವಿ! ಬಾಣಿ. ಎನ್ನೀ ಮಡದಿರನ್ನೆಯುಂ ರತಿಗೆಣೆಯೆಂದು ಪೊಗೞ್ದಿ ಪಾಡುವೊಂದು ಜಾಣ್ಮೆಯ ಪೊರ್ದುಗೆಯ ನುಡಿಬಿನ್ನಣ ಮಸೆನಗೆ ಕರುಣಿಸಾ! ನಿನಗೆಱಗುವೆಂ. ಸುವ್ವಿ! ಸುವ್ವಿ! ಆ! ಆ! ಆ! ಆ! ಆ!!!

ಮನೋ—ನೀಂ ಗೈದ ಸರಸತಿಯ ಪೊಗೞ್ತೆಯ ತುತ್ತ ತುದಿಯ "ಆ! ಆ!!" ಏಂ?

ಮುದ್ದ—ಅಂತದು ಪಾಡಿನ ಜೋಡಿನ ದಾಟಿಯೈಸೆ.

ಮನೋ—ಆಯ್ತಾಯ್ತು ಚೆಲ್ವು. ಏಂ ನಿನ್ನಂ ಸರಸತಿಯೊಲ್ದಳ್?

ಮುದ್ದ—ಎಂತೆಂತೊ ಪಾಡಿ ಬೇಡಿ ಒಲ್ಮೆ ಪಡೆದೆಂ. ಈಗಳೆನಸುಂ ತಡಂಬಡದೆ ಬಣ್ಣಿಸಿ ನಿನತೊಂದೊಲ್ಮೆ ಪಡೆದಪೆಂ ಕೇಳ್! ಮಾಕಾಳಿಯ ಮೆ ಪೊಗರ್ಗೆ........

ಮನೋ—ನಿನ್ನ ರತಿಯುಂ ಬಣ್ಣಿಪೊಂದು ಸಂಧಿಯೊಳ್ ಮಾಕಾಳಿಯೊಳೇಂ ಕಜ್ಜಂ?

ಮುದ್ದ—ಆಃ! ಎಡರ್ಗೇಡಿಯನೆ ಮಱೆತೆಂ; ಆತನಂ ಬಲಂಗೊಳದಿರ್ಪಿನಂ ಮೊತ್ತಮೊದಲಿನೊಳಿನಿತುಂ ವಿಘ್ನಂ. ಓ ಓ! ಒರ್ಪನೆಯ ಬಿಂಕಣಗಿವಿಯ ಮೂಗೊಂಕು ಮೂಗಿನ ಪೇರೊಡಲ ಇಲಿದೇರ ಬೆನಕ! ಇದೆ ಮಣಿವೆಂ. ಈ ರಮಣೀಯಮಪ್ಪ ರತಿದೇವಿಯುಂ ಬಣ್ಣಿಪೊಂದು ಕವನದ ಕಜ್ಜದುಜ್ಜುಗದನಿತೊಂದು ಪೊಱಿ ನೇಮಾಱಿಕ್ಕೆಯೊಳಮೆಡರ್ ಬಾರದಂತು ಕಾವುದು. ಇನಿತೊಂದು ಮೇಲನೊಡರ್ಚಿದೆಯಪ್ಪೊಡೆ ಆ ಬಣ್ಣನೆಯ ಪೊಗೞಿಕ್ಕೆಯಪಾಡಿಂಗೊಲ್ದೆನ್ನೀ ಮಡದಿ ಕೂರ್ಮೆಯಿನೆನಗೆ ತಿನವಡಿಸುವಾ ಪಸುಗೆಯ ಚಕ್ಕುಲಿಯುಂ ಗಾರಿಗೆಯುಂ ಪುರಿಗಡಲೆಯು ನವಲಂ ಕರ್ಬಂ ತೇಂಗಾಯುಂ ನಿನಗಂ ಪಾಲಿತ್ತು ಮೊದಲೊಳರ್ಪಿಸುವೆಂ.

ಮನೋ—ನಿನ್ನ ಬೆನಕಂ ಒರ್ಪನೆವಾಯೊಳೆಂತುಣ್ಗುಂ.

ಮುದ್ದ—ಏಂ ರಮಣಿ ದೇವರುಣ್ಬರೆ? ಉಣ್ಬೊಡಂತೆಂಬೆನೆ?

ಮನೋ—ಮೇಣೊರ್ವನೆ ತಿನಲ್ ಬಗೆವಾ!

ಮುದ್ದ—ನೀನೀವುದೇಂ ದಿಟಂ.

ಮನೋ—ಎತ್ತಾನುಮಿತ್ತೊಡೇಂ ಗೆಯ್ವೆಯ್.

ಮುದ್ದ—ಇಸ್ಸಿ! ಅನಿತ್ತು ಭಕ್ಷ್ಯಮನೊರ್ವನೆ ನುಂಗಲಾರ್ಪನೆ? ಚಕ್ಕುಲಿ ಗಾರಿಗೆಗಳ್ ಕಾಮದೇವಂಗೆ; ಅವಲುಂ ಪುರಿಗಡಲೆಯುಂ ಮುದ್ದಣಂಗೆ: ಕಬ್ಬು ಕಬ್ಬಿಗಂಗೆ; ತೇಂಗಾಯೆನಗೈಸೆ.

ಮನೋ—ನೀಂ ಜಾಣಂ. ನಿನ್ನ ರತಿದೇವಿಗೇಂ?

ಮುದ್ದ—ತಾನೆ ಒಲ್ದೀವ ದೇವಿಗಾವುದಱಿತೊಳಾಸೆಯೊ?

ಮನೋ—ಅಂತಿರೆಯುಂ ಮನೋರಮೆಗೇಂ?

ಮುದ್ದ—ಓವೊ! ರತಿಯಂ ಬಣ್ಣಿಪೊಂದು ಬೆಸನದೊಳ್ ಮನೋರಮೆಯಂ ಮಱೆದುಱಿದೆಂ; ಅಕ್ಕೆ! ಕಬ್ಬಿನ ಸಿವುರುಂ ಮುಗ್ಗಿದ ಗಾರಿಗೆವುಡಿಯುಂ ಮನೋರಮೆಗಿರ್ಕೆ.

ಮನೋ—ನೀಂ ಬಲ್ಗಡಸುಗಾಱಿಂ ಸಾಜಂ; ಇರ್ಕೆ; ನೀಂ ಮನದೊಳೆ ಮಂಡಿಗೆಯನುಂಡಂತಾಯ್ತು. ಈಗಳಿಂ ಕೇಳ್ವೆಂ ರತಿಯ ಪೊಸ ಬಣ್ಣನೆಯಂ.

ಹೀಗೆ ಇನ್ನೆರಡು ಮಾತನಾಡಿ ಕವಿಯು ಕತೆಯನ್ನು ಮತ್ತೆ ಆರಂಭಿಸುವನು.

ಹಾಸ್ಯರಸಯುಕ್ತವಾದ ಇನ್ನೊಂದು ಸಂವಾದವನ್ನು ಮನೋರಮೆಯೇ ಆರಂಭಮಾಡುವಳು. ಶತ್ರುಘ್ನನು ಸೈನ್ಯದೊಡನೆ ಒಬ್ಬ ತಪಸ್ವಿಯ ಆಶ್ರಮಕ್ಕೆ ಹೋಗಲು ಆತನು ಶತ್ರುಘ್ನನನ್ನೂ ಸೈನ್ಯವನ್ನೂ ಮನ್ನಿಸಿ ಮೃಷ್ಟಾನ್ನಭೋಜನದಿಂದ ತಣಿಸಿ ಸತ್ಕರಿಸಿದನೆಂದು ಕವಿಯು ಹೇಳುವನು.

ಮನೋ—ಎನಗಿದಚ್ಚರಿ ಎಂತುಟಾರ್ತಂ?

ಮುದ್ದ—ಮುನಿಗಳೊಂದು ಜಪದ ತಪದ ಮಂತ್ರದ ಬಲ್ಮೆಯೇಂ ಕಿಱಿದೆ? ಬೇಡಿದ ಪುರುಳನುಱಿದಿಂ ತಂದೀಗುಂ.

* * * *

ಮನೋ—ಓ! ಇನಿತೊಂದು ಜಪದ ಬಲ್ಮೆ ನೆರಮಿರ್ಪಿನಂ ಪೆಱತೊಂದಱ ಗೊಡವೆಯಿಲ್ಲದಿರ್ಕುಂ ತಾಪಸರ್.

ಮುದ್ದ—ಅಪ್ಪುದಪ್ಪುದು. ತಪ್ಪೇಂ?

ಮನೋ—ಅದಂತಿರ್ಕೆ, ನಿನ್ನನ್ನರಪ್ಪ ಕಬ್ಬಿಗರ್ ಮನೆವಾೞ್ತಿಯೊಳಿನಿಸೊಂದುಂ ಗೊಡವೆಗೊಳ್ಳದೆ ಕೆಮ್ಮಕೆಮ್ಮನೆ ಪಾೞ್ಗಿತೆಯ ಕಬ್ಬದೊಳೇವೊೞ್ತುಂ ಬೆಮೆಗೊಂಡಿರ್ಪರಲೇ. ಅವರ್ಗೇಂ ಬಟ್ಟೆಯೊ? ಉಣಲೇಂ ತಿನಲೇಂ? ಅಂತಿರೊಂದು ಜಪಮುಂ ಪಿರಿಯದವಸಿಗಳತ್ತಣಿನುಪದೇಶಂಗೊಂಡೊಡಾಗದೆ?

ಮುದ್ದ—(ಮುಗುಳ್ನಗೆಯಿಂ) ಏಂ ಎಮ್ಮವರೊಂದಿರವಿಗೆ ನಗುವಾ? ಆಃ! ಎಮ್ಮನ್ನರಪ್ಪ ಕಬ್ಬಿಗರ್ಗೇಂ ಕೊರತೆಯೋ! ತಾನೆ ಬಯಸಿದೊಡಮೆಯನಾಗಳೇ ತಂದೀವಮಂತ್ರದ ಜಪದೊಂದು ನೆರಂ ತಮ್ಮೊಳೊಂದಿರದೊಡಕ್ಕೆ ಕಾಡಜೋಗಿಗಳತ್ತಣಿನುಪದೇಶಂ. ನಾಡಂ ಕಾಡಂ, ಕಾಡಂ ಬೀಡಂ ಗೆಯ್ವೊಂದು ಪೆರ್ಮೆಯ ಬಲ್ಮೆಯ ಕಬ್ಬಿಗರೇಂ ಕಕ್ಕುಲಿತೆಯ ಮುದುದವಸಿಗಳತ್ತಣಿಂ ಪಿರಿಯರಾಗರೆ? ನುಡಿವರೇನದುವೆ ಪುರುಳ್. ಪಿಡಿವರೇನದುವ ತಿರುಳ್. ಪಲವೇಂ ಕೆಲವೇಂ? ತಮ್ಮೊಂದೆ ನುಡಿಯಬಲ್ಪಿಂ ಮೂಜಗಮುಮನಲ್ಱಿಯಿಸುವ ಪೊಗೞ್ವ ಕೊಳ್ವಾಳ್ವ ತಾಳ್ವ ತೂಳ್ವ ಪೂೞ್ವ ಪೇೞ್ವ ಬಾೞ್ವ ಸಿಂಗರದ ಬಣ್ಣಗಬ್ಬಿಗರೆಮ್ಮ ತೆಱನನಿನ್ನುಂ ನೀನಱಿಯೆಯ್.

ಮನೋ—(ಬಿಸವಂದಂಗೊಂಡು) ನಿಮ್ಮವರ್ಗಮಂತಿರೆ ಮಂತ್ರಂ ಸಿದ್ಧಿವರ್ಕುಮೆ?

ಮುದ್ದ—ತಡೆಯೇನಳ್ಕೇಂ?

ಮನೋ—ನಿನ್ನೊಳವೊಳವೆ?

ಮುದ್ದ—ಎನ್ನೊಳಿಂತಿದು ಪಾಸುವೊಕ್ಕು.

ಮನೋ—ಆಃ! ನೀನುಂ ಬಲ್ಮೆಯ್ಮೆಗಾಱಿಂ. ನಿನಗಾರತ್ತಣಿನೆಂದುಪದೇಶಮಾಯ್ತು?

ಮುದ್ದ—ಗುರುವತ್ತಣಿನಂದೆಳವೆಯೊಳೆ.

ಮನೋ—ಎನ್ನೆಱಿತಿಯ! ಅದಾವುದೊ ಮಂತ್ರಮೆನ್ನೊಳುಸಿರ?

ಮುದ್ದ—ಆಃ! ಆಃ! ಒಳ್ಳಿತೊಳ್ಳಿತು!! ಮಂತ್ರಂಗಡ! ತನಗೊರೆವುದು ಗಡ! ಚಿಃ! ಚಿಃ! ಪೆಣ್ಗಳ್ಗೀಮಂತ್ರೋಪದೇಶಂ ಸಲ್ವುದೆ?

ಮನೋ—ಆನಱಿಯೆನೆ! ನಿನ್ನತ್ತಣಿನುಪದೇಶಂ ಬೇಡುವೆನೆ! ನೀನಾಗಳೆಂದ ಮಂತ್ರಂಗಳೊಳಾವುದದಱ ಪೆಸರೇನೆಂದೆ ಕೇಳ್ವೆಂ.

ಮುದ್ದ—ಆಗಳೆಂದ ಮುನಿಗಳ ಮಂತ್ರಂಗಳೊಳಲ್ತು. ಎಮ್ಮ ಮಂತ್ರಂಗಳ ಬಗೆ ಬೇಱಿತೆ, ಮೂಱಿತೆಂಡಕ್ಕರದ ಮಂತ್ರಂಗಳೆಮಗಕ್ಕುಮೆ! ಎಮ್ಮ ತಂತುಕಿಱಿದಲ್ತು ಬಲ್ತಿರಿದು. ಒಂದಕ್ಕರಮಲ್ತೆರಡಲ್ತು ಮೂಱಿಲ್ತು, ನಾಲ್ಕೈದಲ್ತು, ಆಱುಮಲ್ತು. ಏೞಕ್ಕರದ ಬೀಜಮಂತ್ರಂ.. ಅಂತದಱಿಂ ಸರ್ವಮಂತ್ರಂಗಳ್ಗೆ ತಲೆಯೊಳಿರ್ದು ಮೇಲೆನಿಪ್ಪ ಸಪ್ತಾಕ್ಷರೀಮಂತ್ರಮೆಂದು ಪೆಸರ್.

ಮನೋ—ಹಾಹಾ! ಆ ಮಂತ್ರಕ್ಕಭಿಮಾನಿದೇವತೆ ಯಾವುದು? ಮುನ್ನಮಾರಿದಂ ಜಪಿಸಿ ಸಿದ್ಧಿಗಂಡರ್?

ಮುದ್ದ—ಪೋ ಪೋ! ಇಂತಿವಱಿಂ ಕೊಂಡೇಂ ಕಜ್ಜಂ?

ಮನೋ—ಇರ್ಕೆ, ಕೇಳ್ವೆಂ.

ಮುದ್ದ—ಅಂತಾದೊಡೆ ಕೇಳ್ ಪೇೞ್ವೆಂ. ಇಂತೇರ್ಪಟ್ಟ ಮಂತ್ರದಧಿದೇವತೆ ಜ್ಯೇಷ್ಠೆ. ಮುನ್ನವೀಶ್ವರಂ ತನ್ನೊಂದು ಲೀಲೆಯೊಳ್ ಜಪಿಸಿ ಸಿದ್ಧಿಗೊಂಡನಂತದಱಿನಾತನೆ ಋಷಿ.

ಮನೋ—ಓ ಓ! ಇಂತುಟೆ ಮಂತ್ರದೊಂದು ಮೈಮೆ! ಎಲೆ ರಮಣ! ನಿನ್ನಡಿಗಳ್ಗೆಱಗುವೆಂ ಎನ್ನತಿನಿತೊಂದು ಬಿನ್ನಪಂ. ಅಂತು ಸಂದಸಿದ್ಧಿಯ ಮಂತ್ರಮಾವುದೊ ಕೂರ್ಮೆಯಿಂ ತಿಳಿಯೆ ಪೇೞಿರ್.

ಮುದ್ದ—ಆಗಳೇ ಪೇೞ್ದೆನಲ್ತೆ ಸಪ್ತಾಕ್ಷರೀಮಂತ್ರಮೆಂದು.

ಮನೋ—ಅಂತು ಪೆಸರನಲ್ತು ಮೂಲಮನೆ ಕುರಿತೆನ್ನೊಳಾಡಿ ತೋಱಿ.